ಶ್ರೀಃ

# ಪ್ರ ಕ ಟ ನ

---

ಶ್ರೀ ಭೂ ನೀಳಾದಿನಾಯಕನಾದ ಭಗವನ್ತನು ಶ್ರೀ ವೈಕುಂಠದಲ್ಲಿರುವ ಸೂರಿಗಳನ್ನು ಚೇತನೋಜ್ಜೀವನಾರ್ಥವಾಗಿ ಈ ಲೋಕದಲ್ಲಿ ಅವತರಿಸುವ ಪ್ರೇರಿಸಿದನು. ಆ ನಿತ್ಯಸೂರಿಗಳೇ ಆಳ್ವಾರ್ರುಗಳಾಗಿ ಅವತರಿಸಿ ೪೦೦೦ ದ್ರಾವಿಡ ದಿವ್ಯಪ್ರಬನ್ಧಗಳನ್ನು ರಚಿಸಿದರು. ಆ ಪ್ರಬನ್ಧಗಳಲ್ಲಿರುವ ಶ್ರೀ ಭಗವದನುಭವ ರಸಾತ್ಮಕವಾದ ಅಮೃತವನ್ನು ಸಕಲಮತಸ್ಥರೂ ಪಾನಮಾಡಿ ಕೃತಾರ್ಥರಾಗಬೇಕು. ಪ್ರಕೃತ–ಶ್ರೀ ಶಠಾರಿಮುನಿ ವಿರಚಿತವಾದ "**ತಿರುವಾಯ್ಮೊೞಿ**"—ಎಂಬ ಸಹಸ್ರ ಪದ್ಯಾತ್ಮಕ ದ್ರಾವಿಡ ದಿವ್ಯಪ್ರಬನ್ಧವನ್ನು ಶ್ರೀ ಕಲ್ಕಿಸಿಂಹಭಗವದ್ವಿರಚಿತವಾದ (೧) ಕನ್ನಡಪ್ರತಿಪದಾರ್ಥ (೨) ಸಂಸ್ಕೃತಪದ್ಯಾತ್ಮಕ–ಸಹಸ್ರಗಾಥಾರತ್ನಾವಳೀ (೩) ಕನ್ನಡತಾತ್ಪರ್ಯಗಳೊಡನೆ ಪ್ರಕಟಪಡಿಸಲು ಉದ್ದೇಶಿಸಿ, ಪೂರ್ವಾಚಾರ್ಯ ವಿರಚಿತವಾದ ದ್ರಮಿಡೋಪನಿಷತ್ಸಂಗತಿ, ದ್ರಮಿಡೋಪನಿಷತ್ತಾತ್ಪರ್ಯರತ್ನಾವಳೀ–ಶ್ಲೋಕಗಳೊಡನೆ ಆಯಾ ದಶಕದ ಸಾರಾಂಶವನ್ನೂ ಸಹ ಸೇರಿಸಿ ಮುದ್ರಿಸಲು ಉಪಕ್ರಮಿಸಿರುತ್ತೇವೆ. ಲಲಿತತಮವಾದ ಶೈಲಿಯಿಂದ ವಿರಚಿತವಾಗಿರುವ ಈ ಮಹಾವ್ಯಾಖ್ಯಾನವು ಸಕಲ ಲೋಕೋಪಕಾರಕವಾಗಿರುವುದರಿಂದ ಸರ್ವರೂ ಅಭಿನಂದಿಸಿ ಈ ಮುದ್ರಣಕಾರ್ಯಕ್ಕೆ ತಕ್ಕ ಪ್ರೋತ್ಸಾಹವನ್ನೂ, ಉದಾರವಾದ ದ್ರವ್ಯಸಾಹ್ಯವನ್ನೂ ಮಾಡಬೇಕೆಂದು ಪ್ರಾರ್ಥಿಸುತ್ತೇವೆ.

**ಶ್ರೀ ಕಲ್ಕಿಸಿಂಹ ಭಗವದ್ಭಕ್ತರು.**

## ಮು ದ್ರ ಣ ಕ್ರ ಮ

ಈ ಪ್ರಬನ್ಧವು ೧೦ ಸಂಚಿಕೆಗಳಾಗಿ ಮುದ್ರಿಸಲ್ಪಡುವುದು. ಪ್ರತಿಯೊಂದು ಸಂಚಿಕೆಯಲ್ಲೂ ಒಂದೊಂದು ಶತಕದ ವ್ಯಾಖ್ಯಾನವು ಪ್ರಕಟಿತವಾಗುವುದು. ಚಂದಾದಾರರಿಗೆ ಆಯಾ ಸಂಚಿಕೆಯು ಮುದ್ರಿತವಾದ ಒಡನೆ ಕಳುಹಿಸಲ್ಪಡುವುದು.

೧೦ ಸಂಚಿಕೆಗಳ ಬೆಲೆ 6–0–0. ಒಂದೊಂದು ಸಂಚಿಕೆಯ ಬೆಲೆ 0–12–0.

ಪೋಸ್ಟೇಜ್ 0–10–0 ಸಹ ಮುಂಚಿತವಾಗಿಯೇ ಕಳುಹಿಸಬೇಕು.

ಮ್ಯಾನೇಜರ್,
ಶ್ರೀ ವೇದಾನ್ತ ಪುಸ್ತಕ ಶಾಲಾ,
17, ಈಸ್ಟ್‌ಪಾರ್ಕ್ ರೋಡ್,
ಮಲ್ಲೇಶ್ವರ, **ಬೆಂಗಳೂರು.**

ಶ್ರೀಃ

ಶ್ರೀ ಕಲ್ಕಿಸಿಂಹ ಭಗವತ್ಪ್ರಬನ್ಧಮಾಲಾ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

ಎಂಬ

## ಸಹಸ್ರಗಾಥಾತ್ಮಕ - ದ್ರಾವಿಡ ದಿವ್ಯಪ್ರಬನ್ಧ

ಶ್ರೀ ಕಲ್ಕಿಸಿಂಹಭಗವದ್ವಿರಚಿತವಾದ—(೧) ಕನ್ನಡಪ್ರತಿಪದಾರ್ಥ

(೨) ಸಂಸ್ಕೃತಪದ್ಯಾತ್ಮಕ—ಸಹಸ್ರಗಾಥಾರತ್ನಾವಳೀ

(೩) ಕನ್ನಡತಾತ್ಪರ್ಯ—ಸಮೇತ

(ದ್ರಮಿಡೋಪನಿಷತ್ಸಂಗತಿ-ದ್ರಮಿಡೋಪನಿಷತ್ತಾತ್ಪರ್ಯರತ್ನಾವಳೀ-ಸಹಿತ)



೪ನೆಯ ಸಂಚಿಕೆ

## ಚತುರ್ಥ ಶತಕ

(ಸವ್ಯಾಖ್ಯಾನ)



ಬೆಂಗಳೂರು

ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್ ಯವರ

ಎಲೆಕ್ಟ್ರಿಕ್ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

೧೦ ಸಂಚಿಕೆಗಳುಳ್ಳ
ಸಮಗ್ರ-ಪ್ರಬನ್ಧದ ಕ್ರಯ
ರೂ. 6-0-0.

1931.

ಈ ಸಂಚಿಕೆಯ ಬೆಲೆ
12 ಆಣೆ.

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ಶಠಕೋಪಾಯ ನಮಃ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

## (ಚತುರ್ಥ ಶತಕ)

---

**ಶ್ರೀ ಕಲ್ಕಿಸಿಂಹ ಭಗವದ್ವಿರಚಿತ–ವ್ಯಾಖ್ಯಾನಸಹಿತ.**

ಶ್ರೀಮಾನ್ ಜಯತಿ ಕಲ್ಕೀನ್ದ್ರೋ ನಾರಸಿಂಹಃ ಪರಾತ್ಪರಃ ।
ಪರಿತ್ರಾಣಾಯ ಸಾಧೂನಾಂ ಕೃತಾವತರಣೋ ಹರಿಃ ॥

## ಚತುರ್ಥಶತಕದಲ್ಲಿ—ಪ್ರಥಮದಶಕ.

(ಒರುನಾಯಕಮ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಐಹಿಕೈಶ್ವರ್ಯವೂ ಸ್ವರ್ಗಾದಿ ಭೋಗವೂ ಅಸ್ಥಿರವೆಂದೂ, ಕೈವಲ್ಯವೂ ಅಲ್ಪಫಲವೆಂದೂ, ಶ್ರೀ ಭಗವದನುಭವವೇ ನಿರಪಾಯವಾದ ಪರಮಪುರುಷಾರ್ಥವೆಂದೂ—ಉಪದೇಶಿಸುತ್ತಾರೆ.)

(ಈ ದಶಕವು—ಶ್ರೀ ಯಾದವಾದ್ರಿ—ತಿರುನಾರಾಯಣಪುರ—ದಿವ್ಯದೇಶ ವಿಷಯಕವೆಂದು ಶ್ರೀ ಶಠಾರಿಮುನಿವರ್ಯಾನ್ತರಙ್ಗ ರಹಸ್ಯವಿತ್ತಮರಾದ ಶ್ರೀ ರಾಮಾನುಜಾಚಾರ್ಯರಿಂದ ನಿರ್ಣಯಿಸಲ್ಪಟ್ಟು ಶ್ರೀ ಯಾದವಾದ್ರಿ ನಾರಾಯಣಸ್ವಾಮಿ ಸನ್ನಿಧಿಯಲ್ಲಿ ಸಮರ್ಪಿಸಲ್ಪಟ್ಟಿತೆಂದು ಸಂಪ್ರದಾಯತತ್ತ್ವವು.)

(೧) ಒರುನಾಯಕಮಾಯೋಡ ವುಲಕುಡನಾಣ್ಡವರ್,
ಕರುನಾಯ್‌ಕವರ್‌ನ್ದಕಾಲರ್ ಶಿದೈಕಿಯ ಪಾನೈಯರ್,
ಪೆರುನಾಡುಕಾಣ ವಿಮ್ಮೈಯಿಲೇ ಪಿಚ್ಚೈತಾಮ್ ಕೊಳ್ವರ್,
ತಿರುನಾರಣನ್‌ತಾಳ್ ಕಾಲಮ್ಪೆಱ ಚಿನ್ದಿತ್ತುಯ್‌ಮಿನೋ.

ಶ್ರೀ ಶಠಾರಿಮುನೇರ್ಗಾಥಾಸಹಸ್ರೇ ಪರಮಾತ್ಮನಃ ।
ಚರಣಾವೇವ ಶರಣಂ ಚತುರ್ಥೇ ಶತಕೇ ಸ್ಮೃತಮ್ ॥೧॥
ಶ್ರೀವರ್ಾ ಕಲ್ಕಿನರ್ೃಸಿಂಹಾರ್ಯೈಃ ಪ್ರತಿಪಾದಿಭಯಙ್ಕರೈಃ ।
ಚತುರ್ಥಶತಕವ್ಯಾಖ್ಯಾಂ ಕುರ್ವೇ ಕರ್ಣಾಟಭಾಷಯಾ ॥೨॥

ಪ್ರ॥ ಒರುನಾಯಕಮಾಯ್-ಮಂಡಲಾಧಿಪತ್ಯರೂಪವಾದ ಏಕಚ್ಛತ್ರಾಧಿಪತ್ಯವನ್ನು ಪಡೆದು, ಓಡ-(ಬಹುಕಾಲ) ನಡೆಯುವಂತೆ, ಉಲಕುರ್ಡ-ಲೋಕದೊಂದಿಗೆ ಸೇರಿ, ಆಣ್ಡವರ್-ರಾಜ್ಯರಕ್ಷಣವಂಮಾಡಿದವರು, (ಆ ಐಶ್ವರ್ಯವು ನಷ್ಟವಾದಮೇಲೆ ಲಜ್ಜೆಯಿಂದ ರಾತ್ರಿಕಾಲದಲ್ಲಿ ಭಿಕ್ಷಾರ್ಥಿಗಳಾಗಿ), ಕರುನಾಯ್-ಕರೀನಾಯಿಯಿಂದ, ಕವರ್ನ್ದ-ಕಚ್ಚಲ್ಪಟ್ಟ, ಕಾಲರ್-ಕಾಲುಳ್ಳವರಾಗಿ, ಶಿದೈಕಿಯ-ಒಡೆದು ಎಸೆಯಲ್ಪಟ್ಟ, ಪಾನೈಯರ್-ಮಡಕೆಯಚೂರನ್ನು ಕೈಯಲ್ಲಿ ಹಿಡಿದವರಾಗಿ, ಪೆರುನಾಡು-ಮಹಾಪೃಥಿವಿಯಲ್ಲಿರುವವರೆಲ್ಲರೂ, ಕಾಣ - ಕಾಣುವಂತೆ, ಇಮ್ಮೈಯಿಲೇ-ಈ ಜನ್ಮದಲ್ಲೇ, ಪಿಚ್ಚೈ-ಭಿಕ್ಷೆಯನ್ನು, ತಾಮ್-(ಲಜ್ಜೆಯನ್ನು ಬಿಟ್ಟು) ತಾವೇ ಬೇಡಿ, ಕೊಳ್ವರ್-ಸ್ವೀಕರಿಸುವರು. (ಐಶ್ವರ್ಯವು ಈಪ್ರಕಾರ ಅಸ್ಥಿರವಾದುದರಿಂದ), ತಿರುನಾರಣ-ನಿತ್ಯ ಶ್ರೀವಿಶಿಷ್ಟನಾದ ನಾರಾಯಣನ, ತಾಳ್-ಪಾದಗಳನ್ನು, ಕಾಲಮ್‌ಪೆರ-ಕಾಲವಿಲಂಬವಿಲ್ಲದಂತೆ ಶೀಘ್ರವಾಗಿ, ಚಿನ್ದಿತ್ತು-ಧ್ಯಾನಮಾಡಿ (ಚಿನ್ತಿಸಿ), ಉಯ್ಮಿನ್-ಉಜ್ಜೀವಿಸಿರಿ.

( ಸ ಗಾ-ರ ॥ )—

**ಏಕಚ್ಛತ್ರಾಧಿಪತ್ಯಂ ವಿದಧತಿ ಕಿಲ ಯೇ ಭೂತಲೇ ತೇಽಪಿ ಕಾಲೇ**
**ನೀಲಶ್ವಾಕೃಷ್ಟಪಾದಾ ಧೃತಘಟಶಕಲಾ ಭಿಕ್ಷುಕಾ ಏವ ಹಿ ಸ್ಯುಃ ।**
**ಅಸ್ಮಿನ್ ದೇಶೇಽಪಿ ಸರ್ವೈರ್ಜಗತಿ ಸುವಿದಿತಾ ಏವ! ತಸ್ಮಾತ್ತ್ವಯೂಯಂ**
**ಶ್ರೀಮನ್ನಾರಾಯಣಸ್ಯ ಸ್ಮರತ ಪದಯುಗಂ ನಿತ್ಯಮುಜ್ಜೀವನಾಯ ॥**

ತಾ॥ ಏಕಚ್ಛತ್ರಾಧಿಪತ್ಯವಂ ಮಾಡಿದ ರಾಷ್ಟ್ರಾಧಿಪತಿಗಳೂ ಕೂಡ ಬಹುಕಾಲ ರಾಜ್ಯಭೋಗವಂ ಪಡೆದು ಕ್ರಮೇಣ ನಷ್ಟೈಶ್ವರ್ಯರಾಗಿ ಬೀದಿಯಲ್ಲಿ ರಾತ್ರಿಕಾಲದಲ್ಲಿ (ಕರೀನಾಯಿಯಿಂದ ಕತ್ತಲೆಯಲ್ಲಿ ಕಚ್ಚಲ್ಪಟ್ಟ ಕಾಲುಳ್ಳವರಾಗಿ) ಮಡಕೆಯ ಚೂರನ್ನು ಕೈಯಲ್ಲಿಹಿಡಿದು ಭಿಕ್ಷಾನ್ನವಂ ಬೇಡಿ ಜೀವಿಸುವರು. ಐಶ್ವರ್ಯವು ಹೀಗೆ ಅಸ್ಥಿರವಾದುದರಿಂದ ನಿತ್ಯಶ್ರೀವಿಶಿಷ್ಟನಾದ ನಾರಾಯಣನ ಪಾದಗಳನ್ನೇ ಚಿನ್ತಿಸಿ ಭಜಿಸಿ ಉಜ್ಜೀವಿಸಿರಿ. (ಇದೇ ಶಾಶ್ವತವಾದ ಸಾಮ್ರಾಜ್ಯವನ್ನು ನಿಮಗೆ ಕೊಡುವುದು—ಎಂದು ಭಾವವು.)

(೨) ಉಯ್ಮ್ಮಿನ್ ತಿಱೈಕೊಣರ್ನ್ದೆನ್ಱುಲಕಾಣ್ಡವರಿಮ್ಮೈಯೇ,
ತಮ್ಮಿನ್ಶುವೈ ಮಡವಾರೈ ಪ್ಪಿಱರ್ ಕೊಳ್ಳತ್ತಾಮ್ ವಿಟ್ಟು,
ವೆಮ್ಮಿನೊಳಿವೆಯಿಲ್ ಕಾನಕಮ್ ಪೋಯ್
ಕ್ಕುಮೈತಿನ್ಬರ್ಕಳ್,
ಶೆಮ್ಮಿನ್ಮುಡಿ ತ್ತಿರುಮಾಲೈ ವಿರೈನ್ದಡಿಶೇರ್ಮಿನೋ.

ಪ್ರ|| ತಿಱೈ-ಕಪ್ಪವನ್ನು, ಕೊಣರ್ನ್ದು-ತಂದು ಒಪ್ಪಿಸಿ, ಉಯ್ಮ್ಮಿನ್-ಜೀವಿತರಾಗಿರಿ, ಎನ್ಱು-ಎಂದು, ಉಲಕು ಆಣ್ಡವರ್-(ಕೆಳಗಿನ ರಾಜರಿಗೆ ಆಜ್ಞಾಪಿಸುತ್ತ) ಲೋಕವನ್ನು ಆಳಿದ ಚಕ್ರವರ್ತಿಗಳೂ ಕೂಡ, ಇಮ್ಮೈಯೇ-ಈ ಜನ್ಮದಲ್ಲೇ (ಈ ಶರೀರದೊಡನೆಯೇ), ತಮ್-ತಮ್ಮ, ಇನ್ಶುವೈ-ಅಭಿಮತ ಭೋಗರಸಪ್ರದರಾದ, ಮಡವಾರೈ-ಸ್ತ್ರೀಯರನ್ನು, ಪಿಱರ್-ಅನ್ಯರು, ಕೊಳ್ಳ-ಪರಿಗ್ರಹಿಸುವಂತೆ, ತಾಮ್-ತಾವೇ, ವಿಟ್ಟು-ಕೈಬಿಟ್ಟು (ಆ ದೇಶದಲ್ಲೂ ವಾಸಮಾಡಲಾರದೆ), ವೆಮ್ಮಿನೊಳಿ-ಬೆಂದುಹೋಗುವಂತೆ ಪ್ರಜ್ವಲಿಸುತ್ತಿರುವ, ವೆಯಿಲ್ - ಬಿಸಿಲುಳ್ಳ, ಕಾನಕಮ್-ಕಾಡಿನೊಳಗೆ, ಪೋಯ್-ಹೋಗಿ(ಪ್ರವೇಶಿಸಿ), ಕುಮೈ ತಿನ್ಬರ್ಕಳ್-ಪೀಡೆಗಳನ್ನು ಅನುಭವಿಸುವರು. (ಆದುದರಿಂದ) ಶೆಮ್ಮಿನ್ - ಅಪ್ರತಿಹತ ತೇಜಸ್ಸುಳ್ಳ, ಮುಡಿ-ಕಿರೀಟವಂ ಧರಿಸಿರುವ, ತಿರುಮಾಲೈ-ಶ್ರಿಯಃಪತಿಯನ್ನು, ವಿರೈನ್ದು-ತ್ವರೆಯೊಡನೆ, ಅಡಿಶೇರ್ಮಿನ್-ಪಾದಾಶ್ರಯವಂಮಾಡಿ ಭಜಿಸಿರಿ.

( ಸ-ಗಾ-ರ || )—

ಉಜ್ಜೀವ್ಯಂ ಹಿ ಕರಾರ್ಪಣೈರಿತಿ ನೃಪಾನಾಜ್ಞಾಪ್ಯ ರಾಜ್ಞಾಂ ವರಾ
ಭೂಮ್ಯಾಮತ್ರ ಕಿಲ ತ್ಯಜನ್ತಿ ರಮಣೀಸ್ಸ್ವೀಯಾಶ್ಚ ಭುಕ್ತ್ವಾ ಅಹೋ !
ಅನ್ಯೇಷಾನ್ತು ಕರೇಷು ಹನ್ತ! ವಿಪಿನೇಽಪ್ಯತ್ಯನ್ತತೀವ್ರಾತಪೇ
ಸನ್ತಪ್ತಾ ಇತಿ ದೀಪ್ರಮೌಳೀಹಿತಂ ಶ್ರೀಶಂ ಭಜಧ್ವಂ ಕ್ಷಣಾತ್ ||

ತಾ|| (ಹೀಗೆ ರಾಜ್ಯಭ್ರಷ್ಟರಾಗುವುದು ಮಾತ್ರವೇ ಅಲ್ಲದೆ ತಮಗೆ ಅತ್ಯನ್ತ ಪ್ರಿಯರಾಗಿ ಭೋಗ್ಯತಮರಾಗಿದ್ದ ಸ್ತ್ರೀಗಳನ್ನೂ ಇತರರಿಗೆ ಬಿಟ್ಟು ವನದಲ್ಲಿ ಸಂಚರಿಸುತ್ತ ಸನ್ತಪ್ತರಾಗುತ್ತಾರಾದುದರಿಂದ ಶ್ರಿಯಃಪತಿಯ ಪಾದಗಳನ್ನೇ ಭಜಿಸಿರಿ—ಎಂದು ಹೇಳುತ್ತಾರೆ.) ಕಪ್ಪಗಳನ್ನು ತಂದು ಒಪ್ಪಿಸುವಂತೆ ಇತರ ರಾಜರನ್ನು ಆಜ್ಞಾಪಿಸುತ್ತಿದ್ದ ಚಕ್ರವರ್ತಿಗಳೂ ಕೂಡ ತಮಗೆ ಅತ್ಯನ್ತ ಭೋಗ್ಯರಾದ ಸ್ತ್ರೀಗಳನ್ನು ತಾವೇ ಇತರರಿಗೆ ಒಪ್ಪಿಸಿಬಿಟ್ಟು, ವನದಲ್ಲಿ ತೀವ್ರಾತಪಸನ್ತಪ್ತರಾಗಿ

ಸಂಚರಿಸುತ್ತ ನಾನಾವಿಧ ಕ್ಲೇಶಗಳನ್ನು ಅನುಭವಿಸುವರು. ಆದುದರಿಂದ ದಿವ್ಯ ತೇಜೋವಿರಾಜಮಾನ ಕಿರೀಟಧಾರಿಯಾದ ಶ್ರಿಯಃಪತಿಯ ಪಾದಾರವಿನ್ದಗಳನ್ನೇ ತ್ವರೆಯೊಡನೆ ಆಶ್ರಯಿಸಿ ಕೃತಾರ್ಥರಾಗಿರಿ.

(೩) ಅಡಿಶೇರ್ ಮುಡಿಯಿನರಾಕಿ ಯಾರಶರ್ ಕಳ್ ತಾಮ್ ತೊೞ,
ಇಡಿಶೇರ್ಮುರಶಙ್ಗಳ್ ಮುಱ್ಱತ್ತಿಯಮ್ಬ ಇರುನ್ದವರ್,
ಪೊಡಿಶೇರ್ತುಕಳಾಯ್ ಪ್ಪೋವರ್ಕಳಾದಲಿಲ್ ನೊಕ್ಕೆನ,
ಕಡಿಶೇರ್ತುೞಾಯ್ಮುಡಿ ಕ್ಕಣ್ಣನ್ಕೞಲ್ಕಳ್ನಿನೈಮಿನೋ.

ಪ್ರ|| ಅಡಿ–ತಮ್ಮ ಪಾದಗಳೊಡನೆ, ಶೇರ್ – ಸೇರಿದ, ಮುಡಿಯಿನರಾಕಿ–ಶಿರಸ್ಸುಳ್ಳವರಾಗಿ (ಕಿರೀಟವುಳ್ಳವರಾಗಿ), ಆರಶರ್ಕಳ್–(ಕೈಕೆಳಗಿನ) ರಾಜರು, ತಾಮ್–ತಾವೇ, ತೊೞ–ಸೇವಿಸುತ್ತಿರುವಲ್ಲಿ, ಇಡಿಶೇರ್–ಸಿಡಿಲಿಗೆ ಸಮಾನವಾದ, ಮುರಶಙ್ಗಳ್ – ವಾದ್ಯಗಳು, ಮುಱ್ಱತ್ತು–(ತಮ್ಮ) ಅಂಗಳದಲ್ಲಿ, ಇಯಮ್ಬ–ಶಬ್ದಿಸುತ್ತಿರುವಾಗ, ಇರುನ್ದವರ್ – (ಈ ಶಬ್ದಗಳನ್ನು ಕೇಳಿ ಆನನ್ದಿಸುತ್ತಿದ್ದ) ಚಕ್ರವರ್ತಿಗಳೂ ಕೂಡ, ಪೊಡಿಶೇರ್ತುಕಳಾಯ್– ಇತರವಸ್ತುಗಳೊಡನೆ ಸೇರುವ ಧೂಳೀಕಣಗಳಾಗಿ, ಪೋವರ್ಕಳ್–ನಷ್ಟರಾಗುವರು. ಆದಲಿಲ್–ಆದುದರಿಂದ, ನೊಕ್ಕೆನ–ಶೀಘ್ರವಾಗಿ, ಕಡಿಶೇರ್–ಪರಿಮಳಸಹಿತವಾದ, ತುೞಾಯ್–ತುಳಸೀ ಮಾಲೆಯಿಂದ ಅಲಂಕೃತವಾದ, ಮುಡಿ – ಕಿರೀಟವನ್ನು ಧರಿಸಿರುವ, ಕಣ್ಣನ್–ಶ್ರೀಕೃಷ್ಣನ, ಕೞಲ್ಕಳ್–ಪಾದಗಳನ್ನು, ನಿನೈಮಿನ್–ಧ್ಯಾನಮಾಡಿರಿ.

( ಸ–ಗಾ–ರ || )—

ರಾಜಾನೋ ನಿಜಪಾದಸಕ್ತನೃಪಮಣ್ಡಲ್ಯಾ ಸಳೀಮೌಳಯೋ
ನಿತ್ಯಾಕರ್ಣಿತಭೇರಿನಾದವಿಜಯಾಸ್ವ್ವೀಯಾಙ್ಗಣೇಷು ಸ್ವಯಮ್ |
ಧೂಳೀಭೂತಕಣಾಣವಃ ಕಿಲ ಗತಾಸ್ತಸ್ಮಾದ್ಭಜಧ್ವಂ ಕ್ಷಣಾತ್
ಕೃಷ್ಣಸ್ಯೈವ ಸುದಿವ್ಯಗನ್ಧತುಲಸೀಶೀರ್ಷಸ್ಯ ಪಾದಾಮ್ಬುಜಮ್ ||

ತಾ|| (ರಾಜರು ತಮ್ಮ ಕಾಲಿನಲ್ಲಿ ಬಿದ್ದು ಇದ್ದರೂ ಅನಾದರಿಸುತ್ತಿದ್ದ ಚಕ್ರವರ್ತಿಗಳೂ ಕೂಡ ಧೂಳೀಕಣಗಳಾಗಿ ನಷ್ಟರಾಗುವರೆಂದು ಹೇಳುತ್ತಾರೆ.) ತಮ್ಮ ಪಾದಗಳಲ್ಲಿ ಸಕ್ತವಾದ ಕಿರೀಟಗಳುಳ್ಳ ಅಧೀನರಾಜರು ಸೇವಿಸುತ್ತಿದ್ದಾಗ್ಯೂ ಅನಾದರದೊಡನೆ ತಮ್ಮ ಅಂಗಳದಲ್ಲಿ ಶಬ್ದಿಸುತ್ತಿರುವ ಮಹಾ ಭೇರೀ ನಾದಗಳನ್ನು ಕೇಳಿ ಆನನ್ದಪರವಶರಾಗುತ್ತಿದ್ದ ಚಕ್ರವರ್ತಿಗಳೂ ಕೂಡ ಧೂಳೀ

ಕಣಗಳಾಗಿ (ಅನಾಮಧೇಯರಾಗಿ) ನಷ್ಟರಾಗುವರು. ಆದುದರಿಂದ ದಿವ್ಯಗಂಧ ಯುಕ್ತ ತುಳಸೀಮಾಲಾಲಂಕೃತ ಕಿರೀಟಧಾರಿಯಾದ ಶ್ರೀಕೃಷ್ಣನ ಪಾದಗಳನ್ನೇ ಧ್ಯಾನಮಾಡಿ ಉಜ್ಜೀವಿಸಿರಿ

(೪) ನಿನೈಪ್ಪಾನ್ ಪುಕಿಲ್ ಕಡಲೆಕ್ಕಲಿಲ್ ನುಣ್ಮಣಲಿಲ್ ಪಲರ್,
ಎನೈತ್ತೋರುಕಙ್ಗಳುಮಿವ್ವುಲಕಾಣ್ಡು ಕಳಿನ್ದವರ್,
ಮನೈಪ್ಪಾಲ್ ಮರುಙ್ಗಱ ಮಾಯ್‌ದಲಲ್ಲಾಲ್ ಮಱ್ಱು
ಕ್ಕಣ್ಡಿಲಮ್,
ಪನೈತ್ತಾಳ್ ಮದಕಳಿಱಟ್ಟವನ್ ಪಾದಮ್ ಪಣಿಮಿನೋ.

ಪ್ರ|| ನಿನೈಪ್ಪಾನ್–ಸ್ಮರಿಸಲು (ನೆನೆಯಲು), ಪುಕಿಲ್ – ಯತ್ನಿಸಿದರೆ, ಎನೈತ್ತೋರುಕಙ್ಗಳುಮ್ – ಅನೇಕಯುಗಗಳೂ, ಇ ಉಲಕು – ಈ ಲೋಕವನ್ನು, ಆಣ್ಡು–ಆಳಿ, ಕಳಿನ್ದವರ್–ಅತೀತರಾದವರು (ಮೃತರಾದವರು), ಕಡಲೆಕ್ಕಲಿಲ್–ಸಮುದ್ರದಲ್ಲಿ ರಾಶಿಯಾಗಿರುವ (ಪರ್ವತಾಕಾರವಾಗಿರುವ), ನುಣ್ಮಣಲಿಲ್–ಸೂಕ್ಷ್ಮವಾದ ಮರಳಿಗಿಂತ, ಪಲರ್–ಅಸಂಖ್ಯಾತರಾದವರು. (ಹೀಗೆ ಇವರೆಲ್ಲರೂ ನಷ್ಟರಾದುದರಿಂದ) ಮನೈಪ್ಪಾಲ್ – (ಅವರು ವಾಸಮಾಡುತ್ತಿದ್ದ) ಅರಮನೆಗಳಿಗೂ, ಮರುಙ್ಗು–ಅದರಪಕ್ಕದಲ್ಲಿದ್ದ ಬೈಲುಪ್ರದೇಶಕ್ಕೂ, ಅಱ–ವ್ಯತ್ಯಾಸವು ತಿಳಿಯದಂತೆ, ಮಾಯ್‌ದಲ್ ಅಲ್ಲಾಲ್–ನಷ್ಟವಾಗುವುದು ಮಾತ್ರವಲ್ಲದೆ, ಮಱ್ಱು –ಬೇರೆ ಅವಶಿಷ್ಟವಾಗಿ (ಸ್ಥಿರವಾಗಿ) ಇರುವುದೊಂದನ್ನೂ, ಕಣ್ಡಿಲಮ್–(ನಾವು) ಕಂಡಿಲ್ಲ. (ಆದುದರಿಂದ) ಪನೈ–ಓಲೆಮರದ ಬುಡದಂತೆ ದೊಡ್ಡದಾದ, ತಾಳ್–ಪಾದತಲಗಳುಳ್ಳ, ಮದಕಳಿಱು – ಮತ್ತಗಜವನ್ನು (ಕುವಲಯಾಪೀಡವನ್ನು), ಅಟ್ಟವನ್–ಧ್ವಂಸಮಾಡಿದ ಶ್ರೀಕೃಷ್ಣನ, ಪಾದಮ್ – ಪಾದಗಳನ್ನು, ಪಣಿಮಿನ್–ನಮಸ್ಕರಿಸಿರಿ.

( ಸ-ಗಾ-ರ || )—

ಸಙ್ಖ್ಯಾಯೇತ ಯದಿ ಸ್ವಯಂ ಚ ತದಿದಂ ರಾಜ್ಞಾಂ ಗಣಾಃ ಪ್ರಾಯಶೋ
ಽವನ್ಯಾಸ್ತೇ ಸಿಕತಾಧಿಕಾ ಹಿ ಜಲಧೌ ನಷ್ಟಾ ಯುಗೇಷು ಸ್ವಯಮ್ |
ಕಿಂ ತೇಷಾಂ ಭವನಾನಿ ನೈವ ಸಕಲಾನ್ಯತ್ಯನ್ತನಷ್ಟಾನ್ಯಹೋ ?
ದೃಷ್ಟಂ ಸರ್ವತೋ ಭಜೇತ್ಪದಯುಗಂ ಮತ್ತದ್ವಿಪಧ್ವಂಸಿನಃ ||

ತಾ|| (ಆಯುಃಪರಿಮಿತಿಯೂ ಅತ್ಯಲ್ಪವಾದುದರಿಂದ ಅಸಂಖ್ಯಾತರಾದ ರಾಜಾಧಿರಾಜರೆಲ್ಲಾ ನಷ್ಟರಾದರೆಂದು ಹೇಳುತ್ತಾರೆ.) ಈ ಲೋಕವನ್ನು ಆಳಿ ಅನೇಕಯುಗಗಳಿಂದ ನಷ್ಟರಾದ ರಾಜಾಧಿರಾಜರ ಸಂಖ್ಯೆಯು ಸಮುದ್ರದ ಮರಳು ರಾಶಿಗಳಲ್ಲಿರುವ ಮರಳುಕಣಗಳಿಗಿಂತ ಅಧಿಕವಾಗಿಯೇ ಇರುವುದು. ಹೀಗೆ ನಷ್ಟ ರಾದ ಅವರ ಅರಮನೆಗಳೂ ಬೈಲುಬೈಲಾಗಿ ನಷ್ಟವಾದುವು. ಸ್ಥಿರವಾಗಿ ನಿಲ್ಲುವು ದೊಂದನ್ನೂ ನಾವು ಕಾಣೆವು. ಆದುದರಿಂದ ಕುವಲಯಾಪೀಡವೆಂಬ ಮತ್ತಗಜ ವನ್ನು ಧ್ವಂಸಮಾಡಿದ ಶ್ರೀಕೃಷ್ಣನ ಪಾದಗಳನ್ನೇ ಆಶ್ರಯಿಸಿ ನಮಸ್ಕರಿಸಿರಿ.

(೫) ಪಣಿಮಿರ್ತಿರುವರುಳೆನ್ನುಮ್ಶೀದಪ್ಪೈಮ್ಪೂಮ್ಪಳ್ಳಿ,
ಅಣಿಮೇಕ್ಕುೞಲಾರಿನ್ಬಕ್ಕಲವಿ ಯಮುದುಣ್ಡಾರ್,
ತುಣಿಮುನ್ಬು ನಾಲ ಪ್ಪಲ್ಲೇೞೈಯರ್ ತಾಮಿೞಿಪ್ಪಚ್ಚೆಲ್ವಾರ್,
ಮಣಿಮಿನ್ನುಮೇನಿ ನಮ್ಮಾಯವರ್ ಪೇರ್ ಶೊಲ್ಲಿ ವಾೞ್ಮಿನೋ-

ಪ್ರ|| ಅಮ್-ರಮಣೀಯವಾದ, ಶೀದಮ್ - ಶೀತಳವಾದ, ಪೈ-ವಿಸ್ತೃತ ವಾದ, ಪೂಮ್‌ಪಳ್ಳಿ - ಪುಷ್ಪಶಯನದಲ್ಲಿ, ತಿರುವರುಳ್‌ಪಣಿಮಿರ್ - ಕೃಪೆಮಾಡಿ ಬಿಜಯಮಾಡಿರಿ, ಎನ್ನುಮ್-ಎಂಬ ಆದರೋಕ್ತಿಯುಳ್ಳ, ಅಣಿಮೇಕ್ಕುೞಲಾರ್- ಅಲಂಕೃತ ಮೃದುಕೇಶಗಳುಳ್ಳ ರಮಣೀಮಣಿಗಳ, ಇನ್ಬಕ್ಕಲವಿ ಅಮುದು - ಆನಂದಾತ್ಮಕ ಸಂಶ್ಲೇಷಾಮೃತವನ್ನು, ಉಣ್ಡಾರ್-ಭುಜಿಸಿದವರೂ ಕೂಡ, ತುಣಿ- ವಸ್ತ್ರದ ಶಕಲವು, ಮುನ್ಬು-ಮುಂದುಗಡೆ, ನಾಲ-ಜೋಲಾಡುವಂತೆ (ಹಿಂದೆ ಕಟ್ಟಿ ಕೊಳ್ಳುವುದಕ್ಕೂ ಸಾಲದಂತೆ) ಅಷ್ಟು ದರಿದ್ರತಮರಾಗಿ, ಪಲ್‌ಏೞೈಯರ್- ಅನೇಕ ಸಂಖ್ಯಾತರಾದ ಆ ಸ್ತ್ರೀಗಳು, ತಾಮ್-ತಾವೇ, ಇೞಿಪ್ಪ-ಅನಾದರವಚನ ಗಳಿಂದ ತಿರಸ್ಕರಿಸುವಂತೆ, ಶೆಲ್ವರ್ - (ಅವರಲ್ಲಿಯೇ ಚಾಪಲ್ಯದಿಂದ) ವೃಥಾ ಹೋಗುತ್ತಿರುವರು. (ಆದುದರಿಂದ) ಮಣಿಮಿನ್ನುಮೇನಿ-ನೀಲರತ್ನದಂತೆ ಕಾಂತಿ ಯುಳ್ಳ ದಿವ್ಯಶರೀರವುಳ್ಳ, ನಮ್‌ಮಾಯವರ್ - ನಮ್ಮ ಆಶ್ಚರ್ಯಚೇಷ್ಟಿತನಾದ ಭಗವಂತನ, ಪೇರ್-ನಾಮಗಳನ್ನು, ಶೊಲ್ಲಿ-ಕೀರ್ತನಮಾಡಿ, ವಾೞ್ಮಿನ್-ಬಾಳಿರಿ (ಪ್ರಸನ್ನರಾಗಿರಿ).

( ಸ-ಗಾ-ರ ॥ )—

ರಮ್ಯತ್ವಾನ್ವಿತಶೀತಪುಷ್ಪಶಯನೇ ಸೀಮನ್ತಿನೀಭಿಸ್ಸ್ವಯಂ
ರಾಮಾಭಿಸ್ಸಹ ಭೋಗಸಾರಮನುಭೂಯ್ಯೈವ ಪ್ರಿಯಾಭಿರ್ಜನಾಃ ।
ತಾಭಿಸ್ಸ್ತ್ರೀಭಿರಪಿ ಸ್ವಯಂ ಪರಿಭವಂ ನಾನಾವಿಧಂ ಪ್ರಾಪಿತಾ-
ಸ್ತಸ್ಮಾನ್ನೀಲಮಣಿಸ್ವರೂಪಮನಘಂ ಕೃಷ್ಣಂ ಭಜಧ್ವಂ ಸದಾ ॥

ತಾ॥ (ಅಂಗನಾಪರಿಷ್ವಂಗವೂ ಅಸ್ಥಿರವೆಂದು ಹೇಳುತ್ತಾರೆ.) ರಮ್ಯವಾಗಿಯೂ ಶೀತಳವಾಗಿಯೂ ಇರುವ ಪುಷ್ಪಶಯನದಲ್ಲಿ ಬಿಜಯಮಾಡಿರೆಂದು ಅತ್ಯಾದರೋಕ್ತಿಯುಳ್ಳ ರಮಣೀಮಣಿಗಳ ಸಂಶ್ಲೇಷಾಮೃತರಸವಂ ಪಾನಮಾಡಿ ಆನಂದಿಸುತ್ತಿದ್ದವರೂ ಕೂಡ, ಮಾನರಕ್ಷಣಕ್ಕೆ ವಸ್ತ್ರವೂಕೂಡ ಸಾಲದೆಹೋಗಿ ದೀನತಮರಾಗಿ ಆ ಸ್ತ್ರೀಗಳಿಂದಲೇ ತಿರಸ್ಕೃತರಾಗಿ ವೃಥಾಚಪಲಚಿತ್ತರಾಗುವರು. ಆದುದರಿಂದ ನೀಲಮಣಿವರ್ಣನಾದ ನಮ್ಮ ಮಾಯಾಚೇಷ್ಟಿತವಿಶಿಷ್ಟನಾದ ಭಗವನ್ತನ ನಾಮಗಳನ್ನೇ ಸಂಕೀರ್ತಿಸಿ ಕೃತಾರ್ಥರಾಗಿರಿ.

(೬) ವಾೞ್ನ್ದಾರ್‌ಕಳ್‌ ವಾೞ್ನ್ದದುಮಾಮತ್ತ್ರೈಮೊಕ್ಕುಳಿಲ್‌
ಮಾಯ್‌ನ್ದುಮಾಯ್‌ನ್ದು,
ಆೞ್ನ್ದಾರೆನ್ಱಲ್ಲಾಲನ್ಱುಮುದಲಿನ್ಱುಱುತಿಯಾಯ್‌,
ವಾೞ್ನ್ದಾರ್‌ಕಳ್‌ ವಾೞ್ನ್ದೇ ನಿಱ್ಪರೆನ್ಪದಿಲ್ಲೈ ನಿಱ್ಕುಱಿಲ್‌,
ಆೞ್ನ್ದಾರ್‌ ಕಡಲ್‌ಪಳ್ಳಿಯಣ್ಣಲಡಿಯವರಾಮಿನೋ.

ಪ್ರ॥ ವಾೞ್ನ್ದಾರ್‌ಕಳ್‌–ಚೆನ್ನಾಗಿ ಬಾಳಿದವರೆಂದು ತಮ್ಮನ್ನು ಭಾವಿಸಿಕೊಂಡಿರುವವರು, ವಾೞ್ನ್ದದು–ಬಾಳಿದುದು, ಮಾಮತ್ತ್ರೈ–ಮಹಾವರ್ಷಜಲದಲ್ಲಿ, ಮೊಕ್ಕುಳಿಲ್ (ಮೊಕ್ಕುಳ್‌)–ಗುಳ್ಳೆಯಂತೆ, ಮಾಯ್‌ನ್ದು ಮಾಯ್‌ನ್ದು–ನಶಿಸಿನಶಿಸಿ, ಆೞ್ನ್ದಾರ್–ಅಧಃಪತನವುಳ್ಳವರಾದರು, ಎನ್ಱು ಅಲ್ಲಾಲ್ – ಎಂಬಿಷ್ಟುಮಾತ್ರವೇ ಹೊರತು, ಅನ್ಱುಮುದಲ್ – ಉತ್ಪತ್ತಿಕಾಲದ ಆರಭ್ಯ, ಇನ್ಱು ಉಱುತಿಯಾಯ್–ಈದಿನಪರ್ಯಂತವಾಗಿ, ವಾೞ್ನ್ದಾರ್‌ಕಳ್ – ಬಾಳಿದವರು, ವಾೞ್ನ್ದೇನಿಱ್ಪರ್ – ಬಾಳಿಯೇ ಇರುವರು, ಎನ್ಪದಿಲ್ಲೈ–ಎಂಬುದು ಇಲ್ಲವಷ್ಟೆ. ನಿಱ್ಕುಱಿಲ್–ಶಾಶ್ವತವಾದ ಬಾಳು ಬೇಕಾದರೆ, ಆೞ್ನ್ದು ಆರ್–ಅಗಾಧವಾಗಿ ಪರಿಪೂರ್ಣವಾದ, ಕಡಲ್ ಪಳ್ಳಿ–ಸಮುದ್ರದಲ್ಲಿ ಶಯನಮಾಡಿರುವ, ಅಣ್ಣಲ್–ಸ್ವಾಮಿಗೆ, ಅಡಿಯವರ್–ದಾಸಭೂತರಾಗಿ, ಆಮಿನ್–ಆಗಿರಿ.

( ಸ–ಗಾ–ರ ॥ )—

ಶ್ರೀಮನ್ತೋ ಧನಿಕಾಶ್ಚ ಬುದ್ಬುದಸಮಾ ನಶ್ಯನ್ತಿ ನಶ್ಯನ್ತ್ಯಹೋ !
ಸತ್ಯಂ ! ಜನ್ಮತ ಏವ ನೈಕವಿಧತಾ ಹ್ಯದ್ಯಾವಧಿ ಸ್ಯಾದಹೋ ! |
ತೇಷಾಂ ಸಮ್ಪದಿ ನಶ್ವರತ್ವಮತ ಏವಾಸ್ತೀತಿ ಯೂಯಂ ಸ್ಥಿರಾಂ
ಪ್ರಾಪ್ತುಂ ಸಮ್ಪದಮಪ್ಯಗಾಧಜಲಧೌ ಸುಪ್ತಂ ಹರಿಂ ಪ್ರಾಪ್ನುತ ॥

ತಾ॥ (ಐಶ್ವರ್ಯವನ್ತರೂಕೂಡ ಜಲಬುದ್ಬುದದಂತೆ ಅಸ್ಥಿರವಾಗಿ ನಾಶ ಹೊಂದುವರೆಂದು ಹೇಳುತ್ತಾರೆ.) ಚೆನ್ನಾಗಿ ಬಾಳಿದವರೆಂಬವರೂ ಕೂಡ ಮಹಾ ವೃಷ್ಟಿಯಲ್ಲಿ ನೀರಿನ ಗುಳ್ಳೆಯಂತೆ ನಾಶಹೊಂದುವರು. ಶಾಶ್ವತವಾಗಿ ಬಾಳುವವರು ಯಾರೂ ಇಲ್ಲವಷ್ಟೆ. ಆದುದರಿಂದ ಕ್ಷೀರಾರ್ಣವಶಾಯಿಯಾದ ಸರ್ವೇಶ್ವರನಿಗೆ ದಾಸಭೂತರಾಗಿ ನೀವು ಶಾಶ್ವತವಾದ ಸಮ್ಪತ್ತನ್ನು ಪಡೆಯಿರಿ.

(೭) ಆಮಿೞ್ ಶುವೈಯುವೈಯಾಱ್ಡಡಿಶಿಲುಣ್ಡಾರ್ನ್ದ ಪಿಱ್,
ತೂ ಮೆೞ್ಮೊೞಿಮಡವಾರಿರಕ್ಕಪ್ಪಿನ್ನುಮ್
ತುಱ್ಱುವಾರ್,
ಈಮಿನೆಮಕ್ಕೊರು ತುಱ್ಱೆನ್ಱಿಡಱುವರಾದಲಿಲ್,
ಕೋಮಿೞ್ ತುೞಾಯ್ಮುಡಿ ಯಾದಿಯಮ್ ಶೋದಿ
ಕುಣಙ್ಗಳೇ.

ಪ್ರ॥ ಆಮ್–ಪ್ರಕೃತ್ಯನುಗುಣವಾಗಿ, ಇಱ–ಹೃದ್ಯವಾಗಿ, ಅವೈ – ಲೋಕ ಪ್ರಸಿದ್ಧವಾಗಿರ.ವ, ಆಱುಶುವೈಯೋಡು–ಮಧುರಾಮ್ಲಲವಣತಿಕ್ತಕಟುಕಷಾಯ ವೆಂಬ ಷಡ್ರಸಗಳೊಡನೆ ಕೂಡಿದ, ಅಡಿಶಿಲ್ – (ಶ್ಲಾಘ್ಯವಾದ) ಅನ್ನವನ್ನು, ಉಣ್ಡು–ಭುಜಿಸಿ, ಆರ್ನ್ದಪಿಱ–ತೃಪ್ತರಾದಮೇಲೂ, ತೂ–(ಪ್ರೀತಿಯಿಂದ) ಶುದ್ಧ ವಾಗಿ ತೋರುವ, ಮೆೞ್ಮೊೞಿ – ಮೃದುಭಾಷಣವುಳ್ಳ, ಮಡವಾರ್ – ಸ್ತ್ರೀಗಳು, ಇರಕ್ಕ – ಅಪೇಕ್ಷಿಸಲು, (ಅವರ ಮಾತನ್ನು ಮೀರಲಾರದೆ), ಪಿನ್ನುಮ್ – ಪುನಃ (ಅದರಮೇಲೂ), ತುಱ್ಱುವಾರ್–ಆದರದೊಡನೆ ಭೋಜನಮಾಡುತ್ತಿದ್ದವರೂ ಕೂಡ (ಅನ್ತಹ ಐಶ್ವರ್ಯದಲ್ಲಿದ್ದವರೂ ಕೂಡ), (ಆ ಐಶ್ವರ್ಯವು ನಷ್ಟವಾದಮೇಲೆ) ಎಮಕ್ಕು–ನಮಗೆ, ಒರುತುತ್ತು – ಒಂದುಕವಳ, ಈಮಿೞ್–ಕೊಡಿರಿ, ಎನ್ಱು–ಎಂದು ಯಾಚಿಸಿ, ಇಡಱುವರ್–(ಅದೂ ಸಿಕ್ಕದೆ) ಮನೆಯಿಂದಮನೆಗೆ ಬೀದಿಯಲ್ಲಿ ತಿರುಗುವರು. ಆದಲಿಲ್–ಆದುದರಿಂದ, ತುೞಾಯ್ಮುಡಿ–ತುಳಸೀಮಾಲಾಲಂಕೃತ

ಕಿರೀಟಧಾರಿಯಾದ, ಆದಿ-ಸರ್ವಕಾರಣಭೂತನಾದ, ಅಮ್‌ಶೋದಿ-ರಮಣೀಯ ದಿವ್ಯತೇಜೋಮೂರ್ತಿಯಾದ ಭಗವನ್ತನ, ಕುಣಙ್ಗಳ್-ಕಲ್ಯಾಣಗುಣಗಳನ್ನೇ, ಕೋಮಿ್ರ-ಭುಜಿಸಿರಿ (ಅನುಭವಿಸಿರಿ).

( ಸ-ಗಾ-ರ || )—

ತತ್ರಾದ್ಯಗ್ವಿಧಷಡ್ರಸಾನ್ವಿತಮಹಾ ಶ್ಲಾಘ್ಯಾನ್ನತೃಪ್ತಾ ಅಪಿ
ಸ್ವೈರಂ ಮುಗ್ಧವಧೂವಚಶ್ಚತುರತಾವಶ್ಯಾಃ ಪುನರ್ಭುಞ್ಜತೇ |
ಯಾಚ್ಞಾರ್ಥಂ ಕಬಳಂ ಕಿಲೈ ಕಮಪಿ ಚ ಪ್ರಾಪ್ತುಂ ಚ ತಾಸಾಮಪಿ
ದ್ವಾರಿ ಸ್ಯುಸ್ತತ ಏವ ದಿವ್ಯತುಲಸೀಶೀರ್ಷಂ ಮಹಸ್ಸಂಸ್ತುತ ||

ತಾ|| (ಅನ್ನಪಾನಾದಿಗಳೂ ಕೂಡ ಧಾರಕವಾಗಿಯೂ ಭೋಗ್ಯವಾಗಿಯೂ ಇದ್ದರೂ ಸ್ಥಿರವಾಗಿ ನಿಲ್ಲುವುದಿಲ್ಲವೆಂದು ಹೇಳುತ್ತಾರೆ.) ಷಡ್ರಸೋಪೇತವಾದ ಅನ್ನವನ್ನು ಭುಜಿಸಿ ತೃಪ್ತರಾದವರೂ ಕೂಡ ತಮಗೆ ಪ್ರಿಯರಾದ ಮೃದುಭಾಷಣವುಳ್ಳ ಸ್ತ್ರೀಗಳ ಮಾತುಗಳಿಗೆ ಮರುಳಾಗಿ ಪುನಃ ಭೋಜನಮಾಡುವರು. ಈ ಪ್ರಕಾರ ಇದ್ದ ಐಶ್ವರ್ಯವಂತರೂ ಕೂಡ ನಷ್ಟೈಶ್ವರ್ಯರಾಗಿ ಮನೆಯಿಂದ ಮನೆಗೆ ತಿರುಗುತ್ತ ಒಂದು ಕವಳ ಅನ್ನವನ್ನು ಬೇಡುತ್ತ ಅದೂ ಸಿಕ್ಕದೆ ಭಗ್ನಾಶರಾಗುವರು. ಆದುದರಿಂದ ದಿವ್ಯತೇಜೋಮೂರ್ತಿಯಾದ ಭಗವನ್ತನ ಗುಣಗಳನ್ನೇ ಭುಜಿಸಿ ಕೃತಾರ್ಥರಾಗಿರಿ.

(೮) ಕುಣಙ್ಗಳ್ ನಿಱೈಪುಕೞ್‌ಮನ್ನರ್ ಕೊಡೈಕ್ಕಡನ್
ಪೂಣ್ಡಿರುನ್ದು,
ಇಣಙ್ಗಿ ಯುಲಕುಡನಾಕ್ಕಿಲುಮಾಙ್ಗವನೈಯಿಲ್ಲಾರ್,
ಮಣಙ್ಕೊಣ್ಡ ಪೋಕತ್ತು ಮನ್ನಿಯುಮ್ ಮೀಳ್ವರ್‌ಕಳ್
ಮೀಳ್ವಿಲ್ಲೈ,
ಪಣಙ್ಕೊಳರವಣೈಯಾನ್ ತಿರುನಾಮಮ್ ಪಡಿಮಿನೋ.

ಪ್ರ|| ಕುಣಮ್‌ಕೊಳ್ – ಶೀಲಾದಿಗಳಿಗೆ ಆಕರಭೂತರಾಗಿ, ನಿಱೈಪುಕೞ್-ಪೂರ್ಣವಾದ ಕೀರ್ತಿಯುಳ್ಳ, ಮನ್ನರ್ – ಮೂರ್ಧಾಭಿಷಿಕ್ತರಾದ ರಾಜರೂ, ಕೊಡೈ–ಔದಾರ್ಯವೆಂಬ, ಕಡನ್–ಸ್ವಭಾವವನ್ನು, ಪೂಣ್ಡು–ಅವಲಂಬಿಸಿ, ಇರುನ್ದು–ಸುಪ್ರತಿಷ್ಠಿತರಾಗಿ, ಇಣಙ್ಗಿ-ಅರ್ಥಿಗಳನ್ನು ನಿರೀಕ್ಷಿಸುತ್ತಿದ್ದು ಅವರಲ್ಲಿ ಆದರವುಳ್ಳವರಾಗಿ, ಉಲಕು ಉಡನ್ ಆಕ್ಕಿಲುಮ್–ಲೋಕವೆಲ್ಲಾ ಕೊಂಡಾಡುವಂತೆ ಅವರನ್ನು

ರಕ್ಷಿಸುತ್ತಿದ್ದರೂ, ಅಙ್ಗು–ಆ ಐಶ್ವರ್ಯವಿಷಯವಾಗಿ, ಅವನ್ಯೈ – (ಆ ಐಶ್ವರ್ಯವನ್ನು ಕೊಟ್ಟ) ಸರ್ವೇಶ್ವರನನ್ನು, ಇಲ್ಲಾರ್–ಕೃತಜ್ಞತೆಯಿಂದ ಆಶ್ರಯಿಸದೆ ಇರುವವರು, ಮಣಮ್ ಕೊಣ್ಡು – ನಿತ್ಯೋತ್ಸವರೂಪವಾದ ಸಂಭ್ರಮವುಳ್ಳ, ಪೋಕತ್ತು – ಸಮ್ಪತ್ತಿನ ಭೋಗದಲ್ಲಿ, ಮನ್ನಿಯುಮ್ – ಸ್ಥಿರವಾಗಿ ನಿಂತಮೇಲೂ ಕೂಡ, ಮಾಳ್ವರ್‌ಕಳ್–ಆಸಮ್ಪತ್ತು ನಷ್ಟವಾಗಿ ಪುನಃ ದಾರಿದ್ರ್ಯವನ್ನೇ ಹೊಂದುವರು. (ಆದುದರಿಂದ) ಪಣಙ್ಕೊಳ್–ಫಣೆಗಳುಳ್ಳ, ಅರವು–ಆದಿಶೇಷನನ್ನೇ, ಅಣೈಯಾ–ಶಯನವಾಗಿ ಉಳ್ಳ ಸ್ವಾಮಿಯ, ತಿರುನಾಮಮ್ – ನಾಮಗಳನ್ನು, ಪಡಿಮಿ–ಪಠಿಸಿರಿ. ಮಾಳ್ವಿಲ್ಲೈ–(ಇದರಿಂದ) ನಿಮಗೆ ಪುನರಾವೃತ್ತಿಯಿಲ್ಲದ ಪುರುಷಾರ್ಥ ಸಿದ್ಧಿಯುಂಟಾಗುವುದು.

( ಸ–ಗಾ–ರ || )—

ಪ್ರಖ್ಯಾತಾಶ್ಶುಭಕೀರ್ತಯೋಽಪಿ ಚ ನೃಪಾ ದಾನಪ್ರಶೌಣ್ಡಾಸ್ಸ್ವಯಂ
ಲೋಕಾನಾಮಧಿಪಾಶ್ಚ ಭೋಗರಸಿಕಾ ಸ್ಸತ್ಯಂ ನಿವೃತ್ತಾಃ ಪುನಃ |
ಶ್ರೀಶಸ್ಯಾಶ್ರಯಣಾ ವಿನೈವ ಹಿ ! ತತಶ್ಶ್ರೀ ಶೇಷಶಯ್ಯಾಶ್ರಯಂ
ನಾಮ್ನಾ ಕೀರ್ತಯತಾಚ್ಯುತಂ ! ನ ಹಿ ತದಾ ವಸ್ಸ್ಯಾನ್ನಿವೃತ್ತಿಃ ಪುನಃ ||

ತಾ|| (ರಾಜಾಧಿರಾಜರ ಐಶ್ವರ್ಯವೂ ಅಸ್ಥಿರವಾದುದೆಂದು ಹೇಳುತ್ತಾರೆ.) ಮಹಾಗುಣಶಾಲಿಗಳೆಂದು ಪ್ರಸಿದ್ಧರಾದ ರಾಜರೂಕೂಡ ಉದಾರವಾದ ತಮ್ಮ ಸ್ವಭಾವದಿಂದ ಅರ್ಥಿಗಳನ್ನು ನಿರೀಕ್ಷಿಸುತ್ತ ಅತ್ಯಾದರದೊಡನೆ ಅವರನ್ನು ರಕ್ಷಿಸುತ್ತಿದ್ದಾಗ್ಯೂ, ಸರ್ವೇಶ್ವರನನ್ನು ಮರೆತು ಕ್ರಮೇಣ ನಷ್ಟೈಶ್ವರ್ಯರಾಗಿ ದರಿದ್ರತಮರಾಗುವರು. ಆದುದರಿಂದ ಶೇಷಶಾಯಿಯಾದ ಭಗವನ್ತನ ನಾಮಗಳನ್ನೇ ಕೀರ್ತನಮಾಡಿರಿ. ಇದರಿಂದ ನಿಮಗೆ ಶಾಶ್ವತವಾದ ಪುರುಷಾರ್ಥಸಿದ್ಧಿಯುಂಟಾಗುವುದು.

(೯) ಪಡಿಮನ್ನು ಪಲ್‌ಕಲನ್ ಪಱ್ಱೊಡಱುತ್ತು
ಐಮ್ಪುಲನ್ವೆನ್ಱು,
ಶೆಡಿಮನ್ನು ಕಾಯನ್ಱಾನ್ ಶೆಯ್ದಾರ್‌ಕಳುಮಾಙ್ಗವನೈ
ಯಿಲ್ಲಾರ್,
ಕುಡಿಮನ್ನುಮಿನ್ ಶುವರ್‌ಕ್ಕಮೆಯ್ದಿಯುಮ್
ಮಾಳ್ವರ್‌ಕಳ್ ಮಾಳ್ವಿಲ್ಲೈ,
ಕೊಡಿಮನ್ನು ಪುಳ್ಳುಡೈಯಣ್ಣಲ್ ಕೞಲ್‌ಕಳ್
ಕುಱುಕುಮಿನೋ.

ಪ್ರ॥ ಪಡಿ–ಕ್ಷೇತ್ರವನ್ನೂ, ಮನ್ನು – ಸದಾ ಧರಿಸಿಕೊಂಡಿದ್ದ, ಪಲ್‌ಕಲ‌–ನಾನಾವಿಧಾನೇಕ ಭೂಷಣಗಳನ್ನೂ, ಪಱ್ಱೊಡು ಅಱುತ್ತು – ಸವಾಸನವಾಗಿ ಬಿಟ್ಟು, ಐಮ್ಬುಲ‌–ಐದು ಇನ್ದ್ರಿಯಗಳನ್ನೂ, ವೆನ್ಱು–ಜಯಿಸಿ, ಕೆಡಿಮನ್ನು–(ದೀರ್ಘಕಾಲ ತಪಸ್ಸಿನಿಂದ) ಗಿಡಬೆಳೆದು ಕಾಡಿನಂತೆ ಆಗಿರುವ, ಕಾಯಮ್–(ತಮ್ಮ) ಶರೀರವನ್ನು, ಶೆಱ್ಱಾರ್‌ಕಳುಮ್ – (ಉಪವಾಸಾದಿಗಳಿಂದ) ನಾಶಪಡಿಸಿದವರೂ ಕೂಡ, ಮನ್ನುಮ್–ಕಲ್ಪಾನ್ತಸ್ಥಾಯಿಯಾದ, ಕುಡಿ–ವಂಶವುಳ್ಳವರಾಗಿ, ಇಱ–ಭೋಗ್ಯತಮವಾದ, ಶುವರ್‌ಕ್ಕಮ್–ಸ್ವರ್ಗಲೋಕವನ್ನು, ಎಯ್‌ದಿಯುಮ್–ಹೊಂದಿದಾಗ್ಯೂ, ಅವನೈ–(ಫಲಪ್ರದನಾದ) ಅವನನ್ನು (=ಸರ್ವೇಶ್ವರನನ್ನು), ಆಙ್ಗು–ಆ ಭೋಗಸ್ಥಾನದಲ್ಲೂ, ಇಲ್ಲಾರ್–ಆಶ್ರಯಿಸದೆಹೋದವರು, ಮೀಳ್ವರ್‌ಕಳ್–ಹಿಂತಿರಿಗಿ ಬಂದು ಕೆಳಗೆ ಬೀಳುವರು. (ಆದುದರಿಂದ) ಕೊಡಿಮನ್ನು – ಧ್ವಜದಲ್ಲಿ ನಿತ್ಯವಾಸಮಾಡುವ, ಪುಳ್ ಉಡೈ–ಗರುಡನನ್ನು (ವಾಹನವಾಗಿ) ಉಳ್ಳ, ಅಣ್ಣಲ್–ಸರ್ವೇಶ್ವರನ, ಕೞಲ್‌ಕಳ್–ಪಾದಗಳನ್ನು, ಕುಱುಕುಮಿನ‌–ಆಶ್ರಯಿಸಿರಿ; ಮೀಳ್ವಿಲ್ಲೈ–(ಇದರಿಂದ) ನಿಮಗೆ ಚ್ಯುತಿಯೇ ಇಲ್ಲದಂತೆ ಸಿದ್ಧಿಯುಂಟಾಗುವುದು.

( ಸ–ಗಾ–ರ ॥ )—

ಕ್ಷೇತ್ರಂ ಚಾಭರಣಾದಿಕಂ ಚ ಸಕಲಂ ಸನ್ತ್ಯಜ್ಯ ಜಿತ್ವೇನ್ದ್ರಿಯಾ–
ಣ್ಯತ್ಯನ್ತಂ ಚ ವಿಶೋಷ್ಯ ಕಾಯಮನಿಶಂ ಕ್ಷೀಣಾಃ ಕೃಶಾಜ್ಞಾ ಅಪಿ ।
ಅನ್ಯೇ ಸನ್ತತಭೋಗಸಕ್ತಹೃದಯಾ ಸ್ಸ್ವರ್ಗಸ್ಥಿತಾಶ್ಚ ಚ್ಯುತಾ–
ಸ್ತಸ್ಮಾತ್ತ್ವಂ ಗರುಡಧ್ವಜಸ್ಯ ಚರಣೌ ಪ್ರಾಪ್ಯ ಸ್ತ ನಿತ್ಯಾಚ್ಯುತಾಃ ॥

ತಾ॥ (ಸ್ವರ್ಗಸುಖವೂ ಅಸ್ಥಿರವಾದುದೆಂದು ಹೇಳುತ್ತಾರೆ.) ಕ್ಷೇತ್ರ–ಭೂಷಣಾದಿಗಳನ್ನೆಲ್ಲಾ ತ್ಯಜಿಸಿ, ಪಂಚೇನ್ದ್ರಿಯಗಳನ್ನೂ ಜಯಿಸಿ, ದೀರ್ಘತಪಸ್ಸಿನಿಂದ ಗಿಡಬೆಳೆದು ಕಾಡಿನಂತೆ ತೋರುವ ಶರೀರವನ್ನೂ ಕ್ರಮೇಣ ನಾಶಪಡಿಸಿ ಕಲ್ಪಾನ್ತಸ್ಥಾಯಿಯಾದ ಸ್ವರ್ಗಲೋಕವನ್ನು ಹೊಂದಿದವರೂ ಕೂಡ ಸರ್ವಫಲಪ್ರದನಾದ ಸರ್ವೇಶ್ವರನನ್ನು ಭಜಿಸದೆ ಕ್ಷೀಣಪುಣ್ಯರಾಗಿ ಕೆಳಗೆ ಬಿದ್ದುಬಿಡುವರು. ಆದುದರಿಂದ ಗರುಡಧ್ವಜನಾದ ಸರ್ವೇಶ್ವರನ ಪಾದಗಳನ್ನೇ ಆಶ್ರಯಿಸಿ ಪುನರಾವೃತ್ತಿಯಿಲ್ಲದ (ಚ್ಯುತಿಯಿಲ್ಲದ) ಸಿದ್ಧಿಯನ್ನು ಪಡೆಯಿರಿ.

(೧೦) ಕುೞುಕ ಮಿಕವುಣರ್ವತ್ತೊಡು ನೋಕ್ಕಿ
ಯೆಲ್ಲಾಮ್ ವಿಟ್ಟ,
ಇೞುಕಲೀೞಪ್ಪೆನ್ನುಮ್ ಞಾನಿಕ್ಕುಮಪ್ಪಯನಿಲ್ಲೈಯೇಲ್,
ಶೆೞುಕ ನಿನೈವದೋರ್ ಪಾಶಮುಣ್ಡಾಮ್ ಪಿನ್ನುಮ್
ವೀಡಿಲ್ಲೈ,
ಮೞುಕಲಿಲೀಶನೈ ಪ್ಪಱ್ಱಿ ವಿಡಾವಿಡಿಲ್ ವೀಡಃದೇ.

ಪ್ರ|| ಕುೞುಕ-ಸಮೀಪಿಸುವಂತೆ, ಉಣರ್ವತ್ತೊಡು-ಜ್ಞಾನೈಕಾಕಾರವಾದ ಆತ್ಮವಸ್ತುವಿನೊಡನೆ ಕೂಡಿ, ಮಿಕನೋಕ್ಕಿ-(ದರ್ಶನ ಸಮಾನಾಕಾರವಾಗುವಂತೆ) ಚೆನ್ನಾಗಿ ಪರಿಶೀಲಿಸಿ ಧ್ಯಾನಮಾಡಿ, ಎಲ್ಲಾಮ್ – ಆತ್ಮವ್ಯತಿರಿಕ್ತವಾದ ಸಕಲ ಪುರುಷಾರ್ಥಗಳನ್ನೂ, ವಿಟ್ಟ-ಬಿಟ್ಟವನಾಗಿ, ಇೞುಕಲ್ – ಆತ್ಮಮಾತ್ರ ಪರ್ಯವಸಾನವುಳ್ಳ, ಇೞಪ್ಪು-ಕೈವಲ್ಯವೆಂಬ ಮುಕ್ತಿಯನ್ನು, ಎನ್ನುಮ್-ಪರಮೋತ್ಕೃಷ್ಟವಾದ ಪುರುಷಾರ್ಥವೆಂದು ಭಾವಿಸಿರುವ, ಞಾನಿಕ್ಕುಮ್ – ಜ್ಞಾನಯೋಗನಿಷ್ಠನಿಗೂ, ಅಪ್ಪಯನ್-(ಸರ್ವೇಶ್ವರನನ್ನೇ ಉಪಾಯವಾಗಿಯೂ ಪ್ರಾಪ್ಯವಾಗಿಯೂ ಹೊಂದುವ) ಆ ಪರಮೋತ್ಕೃಷ್ಟವಾದ ಫಲವು, ಇಲ್ಲೈಯೇಲ್ – ಇಲ್ಲವೆಂದು ನಿರ್ಣೀತವಾಗಿರುವಲ್ಲಿ, ಶೆೞುಕ-ನಿಕೃಷ್ಟವಾದ ಫಲಗಳನ್ನು, ನಿನೈವದು-ಸ್ಮರಿಸೋಣವೆಂಬ, ಓರ್ ಪಾಶಮ್-ಒಂದು ದುರಭಿಮಾನವು, ಉಣ್ಡಾಮ್-ಉಂಟಾಗುವುದು. ಪಿನ್ನುಮ್–ಅದರಮೇಲೂ, ವೀಡು–ಆತ್ಮಪ್ರಾಪ್ತಿರೂಪವಾದ ಮೋಕ್ಷವೂ, ಇಲ್ಲೈ-ಸಿದ್ಧಿಸುವುದೇ ಇಲ್ಲ. (ಆದುದರಿಂದ) ಮೞುಕಲ್ ಇಲ್-ಸಮಸ್ತ ಹೇಯಪ್ರತಿಭಟನಾದ, ಈಶನೈ–ಸರ್ವನಿಯನ್ತೃತ್ವಾದಿ ಸಕಲ ಕಲ್ಯಾಣಗುಣ ವಿಶಿಷ್ಟನಾದ ಸ್ವಾಮಿಯನ್ನು, ಪಱ್ಱಿ-(ಉಪಾಯೋಪೇಯತ್ವೇನ) ಆಶ್ರಯಿಸಿ, ವಿಡಾವಿಡಿಲ್–ಎಂದಿಗೂ ಬಿಡದಂತೆ ಪ್ರಪನ್ನನಾದರೆ, ಅಃ ದೇ-ಅದೇ, ವೀಡು–ಭಗವದನುಭವರೂಪವಾದ ಮೋಕ್ಷವು.

( ಸ-ಗಾ–ರ || )—

ಜ್ಞಾನಾದೇವ ಶುಭಾದ್ವಿಚಿನ್ತ್ಯ ಸಕಲಾನ್ ಸನ್ತ್ಯಜ್ಯ ಭೋಗಾನಹೋ !
ಸ್ವಾತ್ಮಾನನ್ದಮಹಾನುಭೂತಿವಿಭವಂ ಪ್ರಾಪ್ತಾಶ್ಚ ನೋ ಭುಞ್ಜತೇ |
ಕೈಙ್ಕರ್ಯಾನುಭವಾಮೃತಂ ಭಗವತಸ್ತೇಷಾಮಪಿ ಜ್ಞಾನಿನಾಂ
ಕೈವಲ್ಯಂ ಕಿಲ ನಿತ್ಯಪಾಶನಿಲಯಶ್ಶ್ರೀಶಂ ಶ್ರಿತಾ ಮೋಕ್ಷಗಾಃ ||

ತಾ|| (ಕೈವಲ್ಯವೆಂಬ ಪುರುಷಾರ್ಥವೂ ನಿಕೃಷ್ಟವಾದುದೆಂದು ಹೇಳುತ್ತಾರೆ.) ಜ್ಞಾನೈಕಾಕಾರವಾದ ಆತ್ಮವಸ್ತುವನ್ನೇ ದರ್ಶನ ಸಮಾನಾಕಾರವಾಗಿ ಧ್ಯಾನ ಮಾಡಿ ತದಿತರವಸ್ತುಗಳನ್ನು ಬಿಟ್ಟು ಆತ್ಮಮಾತ್ರ ಪರ್ಯವಸಿತವಾದ ಕೈವಲ್ಯವೆಂಬ ಮುಕ್ತಿಯನ್ನೇ ಪರಮೋತ್ಕೃಷ್ಟವಾದ ಪುರುಷಾರ್ಥವೆಂದು ಭಾವಿಸಿರುವ ಜ್ಞಾನ ಯೋಗನಿಷ್ಠನಿಗೂ ಸರ್ವೇಶ್ವರಪ್ರಾಪ್ತಿರೂಪವಾದ ಮಹಾಪುರುಷಾರ್ಥವು ಇಲ್ಲ ವಷ್ಟೆ—ಅವನಿಗೆ ನಿಕೃಷ್ಟವಾದ ದುರಭಿಮಾನವುಂಟಾಗುವುದರಿಂದ ಆತ್ಮಪ್ರಾಪ್ತಿ ರೂಪವಾದ ಕೈವಲ್ಯವೂ ಸಿದ್ಧಿಸುವುದಿಲ್ಲ. ಆದುದರಿಂದ, ಅಖಿಲ ಹೇಯ ಪ್ರತ್ಯನೀಕ ನಾಗಿಯೂ ಸಕಲಕಲ್ಯಾಣಗುಣಾಕರನಾಗಿಯೂ ಇರುವ ಸರ್ವೇಶ್ವರನನ್ನೇ ಅವಿಚ್ಛಿನ್ನವಾಗಿ ಆಶ್ರಯಿಸೋಣವೇ ಮೋಕ್ಷವೆಂಬ ಪುರುಷಾರ್ಥವು.

(೧೧) ಅಃದೇ ಯುಯ್ಯ ಪ್ಪುಕುವಮಾಱನ್ರು ಕಣ್ಣನ್ ಕೞಲ್
ಕಳ್ಮೇಲ್,
ಕೊಯ್ಯಪ್ಪೂಮ್‌ಪೊೞಿಲ್ ಶೂೞ್ ಕುರುಕೂರ್
ಚ್ಚಡಕೋಪನ್ ಕುಱ್ರೇವಲ್‌ಕಳ್,
ಶೆಯ್‌ಕೋಲತ್ತಾಯಿರಮ್ ಶೀರ್‌ತ್ತೊಡೈ ಪ್ಪಾಡಲಿವ್ವೈ
ಪತ್ತುಮ್,
ಅಃಕಾಮಲ್ ಕಱ್ಪವರಾೞ್ ತುಯರ್‌ಪೋಯುಯ್ಯ
ಪ್ಪಾಲರೇ.

ಪ್ರ|| ಉಯ್ಯ – ಉಜ್ಜೀವಿಸುವುದಕ್ಕೋಸ್ಕರ, ಪುಕುಮ್ – ಆಶ್ರಯಿಸಲು, ಆಱು–ಉಪಾಯವೂ, ಅಃದೇ-ಅದೇ, ಎನ್ರು–ಎಂದು (ನಿರ್ಣಯಿಸಿ), ಕಣ್ಣನ್ ಕೞಲ್‌ಕಳ್‌ಮೇಲ್ – ಶ್ರೀಕೃಷ್ಣನ ಚರಣಯುಗಳದಮೇಲೆ ಸಮರ್ಪಣೆಗಾಗಿ ಕೊಯ್–ಕೊಯ್ಯಲ್ಪಟ್ಟ, ಪೂಮ್‌ಪೊೞಿಲ್ - ಪುಷ್ಪಸಮೃದ್ಧಿಯುಳ್ಳ ಉದ್ಯಾನ ಗಳಿಂದ ಕೂಡಿದ, ಕುರುಕೂರ್-ಶ್ರೀಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್ –ನಮ್ಮಾೞ್ವಾರ್, ಕುಱ್ರೇವಲ್‌ಕಳ್ – ಅನ್ತರಙ್ಗ ಕೈಂಕರ್ಯರೂಪವಾಗಿ, ಶೆಯ್– ಮಾಡಲ್ಪಟ್ಟ, ಕೋಲಮ್-ಅಲಂಕಾರಭರಿತವಾದ, ಆಯಿರಮ್–ಸಹಸ್ರ ಸಂಖ್ಯಾ ತ್ಮಕವಾದ, ಶೀರ್‌ತ್ತೊಡೈ–ಉತ್ಕೃಷ್ಟರಚನೆಯುಳ್ಳ, ಪಾಡಲ್–ಗಾನರೂಪವಾದ ದಿವ್ಯಪ್ರಬನ್ಧದಲ್ಲಿ, ಇವ್ವೈಪತ್ತುಮ್ – ಈ ಹತ್ತುಪದ್ಯಗಳನ್ನೂ, ಅಃಕಾಮಲ್– ಚ್ಯುತಿಯಿಲ್ಲದಂತೆ (ಅವಿಚ್ಛಿನ್ನವಾಗಿ), ಕಱ್ಪವರ್ – ಅಭ್ಯಸಿಸುವವರು, ಆೞ್– ಐಶ್ವರ್ಯ ಕೈವಲ್ಯಾದಿ ಕ್ಷುದ್ರಪುರುಷಾರ್ಥಗಳಲ್ಲಿ ಮಗ್ನರಾಗುವುದರಿಂದ ಉಂಟಾ

ಗುವ, ತುಯರ್-ದುಃಖವು, ಪೋಯ್-ಹೋಗಿ, ಉಯ್ಯತ್ಪಾಲರೇ (ಉಯ್ಯಪ್ಪಾಲರೇ)-ಭಗವದ್ಭಕ್ತಿರೂಪವಾದ ಆತ್ಮೋಜ್ಜೀವನ ಪ್ರಕಾರದಲ್ಲಿ ಸೇರುವರು.

( ಸ-ಗಾ-ರ || )—

ಮುಕ್ತ್ಯೈ ಸೋಽಯಮುಪಾಯ ಇತ್ಯಪಿ ಹರೇಃ ಕೃಷ್ಣಸ್ಯ ಪಾದದ್ವಯೀ
ರಮ್ಯಶ್ರೀಕುರುಕಾಪುರೀಶಶಠಜಿತ್ಸೂರ್ಯರ್ಪಿತೇ ಭಕ್ತಿತಃ |
ಸಾಹಸ್ರೇ ಚ ಮನೋರಮೋಽತ್ರ ದಶಕಂ ಕೈಙ್ಕರ್ಯರೂಪೇ ತ್ವಿದಂ
ಸರ್ವಂ ಯೇ ಚ ವಿದನ್ತಿ ತೇ ಭವಭಯಂ ಪ್ರಧ್ವಂಸ್ಯ ಚೋಜ್ಜೀವಿತಾಃ ||

ತಾ|| (ಈ ದಶಕದ ಪಠನಫಲವು— ದುಃಖನಿವೃತ್ತಿಪೂರ್ವಕವಾಗಿ ಭಗವತ್ಕೈಂಕರ್ಯರೂಪವಾದ ಆತ್ಮೋಜ್ಜೀವನವೆಂದು ಹೇಳುತ್ತಾರೆ.) ಆತ್ಮೋಜ್ಜೀವನ ಸಾಧನವೂ ಶ್ರೀ ಭಗವಚ್ಚರಣಯುಗಳವೇ (ಪ್ರಾಪ್ಯವೂ ಅದೇ) ಎಂದು ನಿರ್ಣಯಿಸಿ, ಶ್ರೀಕೃಷ್ಣನ ಚರಣಯುಗಳದಲ್ಲಿ ಸಮರ್ಪಣೆಗಾಗಿ ಕೊಯ್ಯಲ್ಪಟ್ಟ ಪುಷ್ಪಗಳ ಸಮೃದ್ಧಿಯುಳ್ಳ ಶ್ರೀ ಕುರುಕಾಪುರಿಗೆ ನಿರ್ವಾಹಕರಾದ ಶಠಾರಿಮುನಿವರ್ಯರಿಂದ ರಚಿಸಲ್ಪಟ್ಟ ದಿವ್ಯಗಾನರೂಪವಾದ ಸಹಸ್ರಪದ್ಯಾತ್ಮಕ ಪ್ರಬನ್ಧದಲ್ಲಿ ಈ ದಶಕವನ್ನು ಅವಿಚ್ಛಿನ್ನವಾಗಿ ಪಠನಮಾಡುವವರು ಸಕಲದುಃಖರಹಿತರಾಗಿ ಭಗವತ್ಕೈಂಕರ್ಯರೂಪವಾದ ಆತ್ಮೋಜ್ಜೀವನವಂ ಪಡೆಯುವರು.

( ದ್ರ-ಉ-ಸಂ || )—

ಆದ್ಯೇ ಚತುರ್ಥಶತಕೇ ದಶಕೇ ಶಠಾರಿ-
ಸ್ತುಷ್ಟಸ್ತಥಾ ಪರಹಿತಂ ದಯಯಾ ವಿವೃಣ್ವನ್ |
ರಾಜ್ಯಸ್ವರಾತ್ಮಪರಿಭೋಗಚಲಾಲ್ಪಭಾವೌ
ಸಮ್ಯಕ್ ಪ್ರಸಾಧ್ಯ ಹರಿಮೇವ ಪುಮರ್ಥಮಾಹ ||

( ದ್ರ-ಉ-ತಾ-ರ || )—

ಶ್ರೀಮನ್ನಾರಾಯಣಸ್ಸ್ವಾಮ್ಯನುಗುಣಮಕುಟೋ ವೀರಧಾಮಾಙ್ಕಮೌಳಿ-
ರ್ದುರ್ದಾನ್ತಾರಾತಿಹನ್ತಾಽದ್ಭುತನಿಯತತನುಃ ಕಲ್ಪಪಾಥೋಧಿಕಲ್ಪಃ |
ವಿಶ್ವಾದ್ಯಜ್ಯೋತಿರುರ್ವೀಧರಫಣಿಶಯನೋ ವೇದರೂಪಸ್ವಕೇತು-
ರ್ನಿರ್ಧೂತಾಶೇಷದೋಷಃ ಪ್ರಭುರಥ ಕಥಿತಸ್ಸುಸ್ಥಿರೈಶ್ವರ್ಯಸೀಮಾ ||

(ಈ ಪ್ರಥಮದಶಕದ ಸಾರಾಂಶ)—

ಈ ಪ್ರಥಮದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಐಶ್ವರ್ಯ ಕೈವಲ್ಯಾದಿ ನಿರತರಾದವರನ್ನು ಕುರಿತು ಆ ಕ್ಷುದ್ರಪುರುಷಾರ್ಥಗಳೆಲ್ಲವೂ ಅಸ್ಥಿರವಾಗಿಯೂ ಅತ್ಯಲ್ಪವಾಗಿಯೂ ಅನರ್ಥಜನಕಗಳಾಗಿಯೂ ಇವೆಯೆಂದು ನಿರೂಪಿಸಿ, ಶ್ರೀ ಮನ್ನಾರಾಯಣನ ಚರಣಾರವಿನ್ದಯುಗಳದಲ್ಲಿ ನಿತ್ಯಕೈಂಕರ್ಯವೇ ಪರಮೋತ್ಕೃಷ್ಟ ವಾದ ಪುರುಷಾರ್ಥವೆಂದು ವಿವರಿಸಿ ಇರುತ್ತಾರೆ.

ಶ್ರೀಃ

## ಚತುರ್ಥಶತಕದಲ್ಲಿ—ದ್ವಿತೀಯದಶಕ.

(ಪಾಲನಾಯ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಹೊಂದಿ ಈ ನಾಯಕಿಯು ಶ್ರೀ ಭಗವನ್ತನ ಪೂರ್ವಾವತಾರಗಳನ್ನು ನೋಡಲ ಪೇಕ್ಷೆಯಿಂದ ತತ್ಪಾದ ತುಲಸಿಯನ್ನು ಇಚ್ಛಿಸುತ್ತಾಳೆಂದು ನಾಯಿಕಾಜನನಿಯು ವಚನವನ್ನು ಅನುವದಿಸುತ್ತಾರೆ.)

(೧) ಪಾಲನಾಯೇೞುಲಕುಣ್ಡು ಪರಿವಿನ್ರಿ,
ಆಲಿಲೈ ಯನ್ನವಶಂ ಶೆಯ್ಯುಮಣ್ಣಲಾರ್,
ತಾಳಿಣೈ ಮೇಲಣಿ ತಣ್ಣನ್ತುೞಾಯೇ
ಮಾಲುಮಾಲ್, ವಲ್ವಿನೈಯೇೞ ಮಡವಲ್ಲಿಯೇ.

ಪ್ರ॥ ಪಾಲನಾಯ್-ಅತಿಬಾಲನಾಗಿಯೇ, ಏೞುಲಕು-ಸಪ್ತಲೋಕಗಳನ್ನೂ (ಸಮಸ್ತ ಲೋಕಗಳನ್ನೂ), ಉಣ್ಡು-ಭಕ್ಷಿಸಿ, (ಆದರಿಂದ) ಪರಿವು ಇನ್ರಿ-ಒಂದು ಕ್ಲೇಶವೂ ಇಲ್ಲದೆ, ಆಲಿಲೈ-ಒಂದು ಆಲದ ಎಲೆಯಮೇಲೆ, ಅನ್ನವಶಂಶೆಯ್ಯುಮ್-ಊಟಮಾಡಿದುದಕ್ಕೆ ತಕ್ಕಂತೆ ಶಯನಮಾಡಿರುವ, ಅಣ್ಣಲಾರ್ – ಸ್ವಾಮಿಯ

ತಾಳಿಣೈಮೇಲ್-ಚರಣಯುಗಳದಮೇಲೆ, ಅಣಿ - (ಈ ಮಹಾ ಸಾಹಸಕೃತ್ಯವಂ ನೋಡಿ ವಿಸ್ಮಿತರಾದ ದಿವ್ಯಸೂರಿಗಳಿಂದ ಅಲಂಕಾರವಾಗಿ) ಸಮರ್ಪಿಸಲ್ಪಟ್ಟ, ತಣ್-ಶೀತಳವಾದ, ಅಮ್-ರಮ್ಯವಾದ (ಭೋಗ್ಯವಾದ), ತುೞಾಯ್ ಎನೇ-'ತುಳಸಿ' ಎಂದು ಅದನ್ನೇ ಅಪೇಕ್ಷಿಸುತ್ತ, ಮಾಲುಮ್-(ಇದು ಅತೀತಕಾಲದ ಚರಿತ್ರ, ಈಗ ಅದು ಲಭ್ಯವಲ್ಲ—ಎಂದು ತಿಳಿಯುದೆ) ಭ್ರಾನ್ತೆಯಾಗಿರುವಳು. ವಲ್ ವಿನೈಯೇ-ಮಹಾಪಾಪಿಷ್ಠೆಯಾದ ನನ್ನ, ಮಡವಲ್ಲಿಯೇ-ಹಠವಂಹಿಡಿದು ಇರುವ ಈ ನನ್ನ ಕನ್ಯೆಯು (ಆಶ್ರಯವೃಕ್ಷವನ್ನು ಅಪೇಕ್ಷಿಸುವ) ಲತೆಯಂತೆ ಇದಾಳೆ. ('ಏನು ಮಾಡಲಿ?'—ಎಂದು ತಾಯಿಯು ಕೊರಗುತ್ತಾಳೆ.) (ಕಾಲಿಣೈಮೇಲಣಿ—ಎಂದೂ ಪಾಠವಿದೆಯಂತೆ)

( ಸ-ಗಾ-ರ || )—

ಬಾಲಸ್ಯ ಸಪ್ತಭುವನಾನ್ಯುಪಭುಜ್ಯ ತುಷ್ಟ್ಯೈ
ಪತ್ರೇ ವಟಸ್ಯ ಶಯಿತಸ್ಯ ಪದಾಬ್ಜಯುಗ್ಮೇ |
ದಿವ್ಯಾ ಮಮಾಸ್ತು ತುಲಸೀಹ ಸುಶೀತಲೇತಿ
ಕ್ರನ್ದತ್ಯಹೋ ! ಮಮ ಸುತಾಽದ್ಯ ಸುಶೀಲವಲ್ಲೀ ||

ತಾ|| (ವಟಪತ್ರಶಾಯಿಯಾದ ಸ್ವಾಮಿಯ ಪಾದತುಳಸಿಯನ್ನು ಈ ನನ್ನ ಮಗಳು ಈಗ ಅಪೇಕ್ಷಿಸುತ್ತಾಳೆಂದು ತಾಯಿಯು ಹೇಳಿ ಚಿನ್ತಿಸುತ್ತಾಳೆ.) ಬಾಲನಾಗಿದ್ದುಕೊಂಡೇ ಸಕಲ ಲೋಕಗಳನ್ನೂ ಭಕ್ಷಿಸಿ ಒಂದು ಆಲದ ಎಲೆಯಮೇಲೆ ಮಲಗಿರುವ ಸ್ವಾಮಿಯ ಪಾದತುಳಸಿಯು ಈಗ ಬೇಕೆಂದು ಈ ನನ್ನ ಕೋಮಲಾಂಗಿಯಾದ (ಲತೆಯಂತಿರುವ) ಕನ್ಯೆಯು ಅಪೇಕ್ಷಿಸುತ್ತ ಹಠವಂ ಹಿಡಿದು ಭ್ರಾನ್ತೆಯಾಗಿದಾಳೆ. ಏನುಮಾಡಲಿ? (ಇದನ್ನೆಲ್ಲಾ ನೋಡಬೇಕಾದ ಮಹಾ ಪಾಪವನ್ನು ನಾನು ಮಾಡಿರುತ್ತೇನೆಂದು ತಾಯಿಯು ಕೊರಗುತ್ತಾಳೆ.)

(೨) ವಲ್ಲಿಶೇರ್ ನುಣ್ಣಿಡೈ ಯಾಯ್‌ಚ್ಚಿಯರ್ ತಮ್ಮೊಡುಮ್,
ಕೊಲ್ಲಮೈ ಶೆಯ್ದು ಕುರವೈ ಪಿಣೈನ್ದವರ್,
ನಲ್ಲಡಿಮೇಲಣಿ ನಾಱು ತುೞಾಯೆನ್ರೇ
ಶೊಲ್ಲುಮಾಲ್, ಶೂೞ್‌ವಿನೈಯಾಟ್ಟಿಯೇನ್ ಪಾವೈಯೇ.

ಪ್ರ|| ವಲ್ಲಿಶೇರ್-ಬಳ್ಳಿಗೆ ಸಮಾನವಾದ, ನುಣ್-ನುಣುಪಾದ, ಇಡೈ-ಕಟಿಪ್ರದೇಶವುಳ್ಳ, ಆಯ್‌ಚ್ಚಿಯರ್ ತಮ್ಮೊಡುಮ್ - ಗೋಪಿಗಳೊಡನೆ ಕೂಡಿ,

ಕೊಳ್ಳೈವೈ – ಎಲ್ಲಿಯುಂ ಮೀರಿದ (ಕ್ರೀಡಾ) ಚೇಷ್ಟಿತವಂ, ಶೆಯ್ದು – ಮಾಡಿ, ಕುರವೈ ಪಿಣೈನ್ದವರ್ – ರಾಸಕ್ರೀಡೆಯನ್ನು ಮಾಡಿದ ಸ್ವಾಮಿಯ, ನಲ್–ರಮ್ಯವಾದ, ಅಡಿಮೇಲ್–ಪಾದಗಳಮೇಲೆ, ಅಣಿ–ಅಲಂಕರಿಸಲ್ಪಟ್ಟ, ನಾಱು–ಪರಿಮಳಭರಿತವಾದ, ತುೞಾಯ್ ಎನ್ನೇ–ತುಳಸಿಯೆಂದೇ, ಶೊಲ್ಲುಮ್ – ಹೇಳುತ್ತಿದ್ದಾಳೆ, ಶೂೞ್–ಸುತ್ತಿಕೊಂಡಿರುವ, ವಿನೈಯಾಟ್ಟಿಯೇನ್ – ಪಾಪವುಳ್ಳ ನನ್ನ, ಪಾವೈ–ಈ ಮಗಳು.

( ಸ–ಗಾ–ರ || )—

ವಲ್ಲೀಸಮಾಸ್ತನುಕಟೀಃ ಪರಿಭುಜ್ಯ ಗೋಪೀ-
ರ್ಯಸ್ಸಾಹಸಾದಕೃತ ರಾಸವಿಧಾನಲೀಲಾಮ್ |
ದಿವ್ಯಾಂ ಚ ತಸ್ಯ ತು ಹರೇಸ್ತುಲಸೀಂ ಪದಸ್ಥಾಂ
ವಾಞ್ಛತ್ಯಹೋ! ಮಮ ಸುತಾ ಕಿಲ ಪಾಪವತ್ಯಾಃ ||

ತಾ|| (ಪ್ರಳಯಕಾಲದ ವಟಪತ್ರಶಾಯಿಯ ಪಾದತುಳಸಿಯು ಸಿಕ್ಕದೆ ಇದ್ದರೂ ನನ್ನಂತಹ ಅಬಲೆಗಳಾದ ಗೋಪೀಜನರಿಗೆ ವಲ್ಲಭನಾದ ಶ್ರೀಕೃಷ್ಣನ ಪಾದತುಳಸಿಯಾದರೂ ಬೇಕೆಂದು ಅಪೇಕ್ಷಿಸುತ್ತಾಳೆಂದು ತಾಯಿ ಹೇಳುತ್ತಾಳೆ.) ಲತೆಯಂತೆ ನುಣುಪಾದ ಕಟಿಪ್ರದೇಶವುಳ್ಳ ಗೋಪಿಗಳೊಡನೆ ಕೂಡಿ, ಉತ್ಕೃಷ್ಟ ಲೀಲಾಚೇಷ್ಟಿತವಂಮಾಡಿ ರಾಸಕ್ರೀಡೆಯನ್ನು ಅನುಭವಿಸಿದ ಸ್ವಾಮಿಯ ಪಾದಗಳ ಮೇಲೆ ಅಲಂಕರಿಸಲ್ಪಟ್ಟ ಪರಿಮಳಭರಿತವಾದ ತುಳಸಿಯು ಬೇಕೆಂದು ಪಾಪಿಷ್ಠೆಯಾದ ನನ್ನ ಈ ಮಗಳು ಕ್ರಂದನ ಮಾಡುತ್ತಾಳೆ.

(೩) ಪಾವಿಯಲ್ವೇದ ನನ್ಮಾಲೈ ಪಲ ಕೊಣ್ಡು,
ತೇವರ್‌ಕಳ್ ಮಾಮುನಿವರಿರೈಞ್ಜ ನಿನ್ಱ,
ಶೇವಡಿಮೇಲಣಿ ಶೆಮ್ಬೊನ್ ತುೞಾಯ್ಱೇ
ಕೂವುಮಾಲ್, ಕೋಳ್ವಿನೈಯಾಟ್ಟಿಯೇನ್ ಕೋದೈಯೇ.

ಪ್ರ|| ಪಾ–ಛಂದಸ್ಸಿನಲ್ಲಿ, ಇಯಲ್–ವರ್ತಿಸುವ, ವೇದಮ್ – ವೇದಸೂಕ್ತಗಳನ್ನೂ, ನಲ್–ದಿವ್ಯವಾದ, ಪಲ–ಅನೇಕವಿಧವಾದ, ಮಾಲೈ–ಮಾಲೆಗಳನ್ನೂ, ಕೊಣ್ಡು–ತಂದು, ತೇವರ್‌ಕಳ್–ದೇವತೆಗಳು, ಮಾಮುನಿವರ್–ಸನಕಾದಿ ಮಹಾಮುನೀನ್ದ್ರರೂ, ಇಱೈಞ್ಜ–ಆರಾಧಿಸುವಂತೆ, ನಿನ್ಱ–(ಲೋಕಗಳನ್ನೆಲ್ಲಾ ಅಳೆದು) ನಿಂತ, ಶೇ ಅಡಿಮೇಲ್–ಕೆಂದಾವರೆಯಂತಿರುವ ಪಾದಗಳಮೇಲೆ, ಅಣಿ–ಅಲಂಕೃತ

ವಾದ, ಶೆವ್-ಕೆಂಪಾದ, ಪೋ-ಭೋಗ್ಯವಾದ (ರಮ್ಯವಾದ), ತುೞಾಯೆನ್ನೇ-ತುಳಸಿಯೆಂದೇ, ಕೂವುಮ್-ಕೂಗುತ್ತಿದಾಳೆ; ಕೋೞ್ವಿನೈಯಾಟ್ಟಿಯೇ-ಪ್ರಬಲ ಪಾಪವುಳ್ಳ ನನ್ನ, ಕೋದೈ-ಪುಷ್ಪಮಾಲೆಯಂತಿರುವ (ಪುಷ್ಪಮಾಲೆಯಂ ಧರಿಸಿರುವ) ಈ ಮಗಳು.

( ಸ-ಗಾ-ರ || )—

ಛನ್ದಾಂಸಿ ಚ ಶ್ರುತಿಮಯಾನಿ ಚ ದಿವ್ಯಮಾಲಾ
ಆನೀಯ ದೇವನಿವಹೈರ್ಮುನಿಭಿಶ್ಚ ಪೂಜ್ಯೈಃ ।
ಆರಾಧಿತಸ್ಯ ತುಲಸೀಂ ಪದಪದ್ಮಸಕ್ತಾಂ
ವಾಞ್ಛತ್ಯಹೋ ! ಮಮ ಸುತಾ ಕುಸುಮಸ್ರಗಾಢ್ಯಾ ||

ತಾ|| (ಕೃಷ್ಣಾವತಾರದಂತೆ ಕೆಲವರಿಗೆ ಮಾತ್ರವಲ್ಲದೆ ಸಕಲಲೋಕಗಳಿಗೂ ಉಜ್ಜೀವನವಂ ಉಂಟುಮಾಡಿದ ತ್ರಿವಿಕ್ರಮಾವತಾರದ ಸ್ವಾಮಿಯ ಪಾದತುಳಸಿಯನ್ನು ಅಪೇಕ್ಷಿಸುತ್ತಾಳೆಂದು ಹೇಳುತ್ತಾಳೆ.) ದಿವ್ಯತಮರಚನೆಯುಳ್ಳ ಛಂದೋಬದ್ಧವಾದ ಅಸಂಖ್ಯಾತ ವೇದಸೂಕ್ತಗಳನ್ನೂ ದಿವ್ಯವಾದ ಮಾಲೆಗಳನ್ನೂ ತಂದು ದೇವತೆಗಳೂ ಮಹಾಮುನಿಗಳೂ ಆರಾಧಿಸುವಂತೆ (ಸಕಲಲೋಕಗಳನ್ನೂ ಅಳೆದು) ನಿಂತ ಸ್ವಾಮಿಯ ಪಾದತುಳಸಿಯನ್ನು ಈ ನನ್ನ ಸುಕುಮಾರಿಯಾದ (ಪುಷ್ಪಮಾಲೆಯಂತಿರುವ) ಕನ್ಯೆಯು ಅಪೇಕ್ಷಿಸುತ್ತ ಕೂಗುತ್ತಿದಾಳೆ. (ಪಾಪಿನಿಯಾದ ನಾನು ಏನು ಮಾಡಲಿ ?)

(೪) ಕೋದಿಲ ವಣ್ಪುಕೞ್ ಕೊಣ್ಡು ಶಮಯಿಕಳ್,
ಪೇದಙ್ಗಳ್ ಶೊಲ್ಲಿ ಪ್ಪಿದಱ್ಱುಮ್ಪಿರಾನ್ ಪರನ್,
ಪಾದಙ್ಗಳ್ ಮೇಲಣಿ ಪ್ಪೈಮ್ಬೊನ್ ತುೞಾಯೆನ್ಱೇ
ಓದುಮಾಲ್, ಊೞ್ವಿನೈಯೇನ್ ತಡನ್ದೋಳಿಯೇ.

ಪ್ರ|| ಕೋದು (ಸ್ವೋತ್ಕರ್ಷಾರ್ಥವೆಂಬ) ದೋಷವು, ಇಲ್ – ಇಲ್ಲದ, ವಣ್-ವಿಲಕ್ಷಣವಾದ, ಪುಕೞ್-ಗುಣಗಳನ್ನು, ಕೊಣ್ಡು-ಸ್ವೀಕರಿಸಿ, ಶಮಯಿಕಳ್-ಆಯಾ ಮತಸ್ಥರು, ಪೇದಙ್ಗಳ್-ಗುಣಗಳಲ್ಲಿ (ಶೀಲಾದಿ-ಶೌರ್ಯಾದಿ-ಆನನ್ದಾದಿ) ಭೇದಗಳನ್ನು, ಶೊಲ್ಲಿ-ಹೇಳಿ, ಪಿದಱ್ಱುಮ್-(ಸರಸವಾದ) ಅಕ್ರಮೋಕ್ತಿಗಳನ್ನು ಹೇಳುವಂತೆ ಮಾಡುವ, ಪಿರಾನ್-ಮಹೋಪಕಾರಕನಾದ, ಪರನ್-ಸರ್ವಸ್ಮಾತ್ಪರನಾದ ಭಗವನ್ತನ, ಪಾದಙ್ಗಳ್‌ಮೇಲ್ – ಪಾದಗಳಲ್ಲಿ, ಅಣಿ-(ದಿವ್ಯಸೂರಿಗಳಿಂದ)

ಸಮರ್ಪಿಸಲ್ಪಟ್ಟ, ಪೈನ್ಪೊರ್-ಶುದ್ಧ ಸುವರ್ಣದಂತೆ ಶ್ಲಾಘ್ಯವಾದ, ತುೞಾಯ್-ತುಳಸಿ, ಎನ್ಱೇ-ಎಂದೇ, ಓದುಮ್-(ಯಾವಾಗಲೂ) ಹೇಳುತ್ತಿದಾಳೆ; ಊೞ್ವಿನೈಯೇಱ್ - ಅನಾದಿ ಪಾಪವಶ್ಯೆಯಾದ ನನ್ನ, ತಡಮ್‌ತೋಳಿಯೇ - ಸುವೃತ್ತವಾದ ತೋಳುಗಳುಳ್ಳ ಈ ಕನ್ಯೆಯು.

( ಸ-ಗಾ-ರ || )—

ನಿರ್ದೋಷದಿವ್ಯಗುಣಕೀರ್ತನಸಕ್ತಚಿತ್ತಾನ್
ವಿದ್ವದ್ವರಾನಪಿ ಚ ಮೋಹಯತೋ ಮುರಾರೇಃ |
ಪಾದಾಬ್ಜದಿವ್ಯತುಲಸೀಂ ಸತತಂ ಪಠನ್ತೀ
ಸೇಯಂ ಸುತಾ ಶುಭಭುಜಾ ಮಮ ಪಾಪವತ್ಯಾಃ ||

ತಾ|| (ಕಾದಾಚಿತ್ಕವಾದ ಅವತಾರಗಳ ಪಾದತುಳಸಿಯು ಈಗ ದುರ್ಲಭವಾದರೆ ನಿತ್ಯಸಿದ್ಧನಾದ ಪರಮಪದ ನಾಥನ ಪಾದತುಳಸಿಯು ಎಂದಿಗೂ ಲಭ್ಯವಾದುದರಿಂದ ಈಗ ಅದು ನನಗೆ ಬೇಕೆಂದು ಇವಳು ಅಪೇಕ್ಷಿಸುತ್ತಾಳೆಂದು ತಾಯಿಯು ಹೇಳುತ್ತಾಳೆ.) ಶ್ರೀ ಭಗವನ್ತನ ಗುಣಗಳಲ್ಲಿ ಶೀಲಾದಿ-ಶೌರ್ಯಾದಿ-ಆನನ್ದಾದಿ ಗುಣಭೇದಗಳನ್ನು ಅನುಸನ್ಧಾನಮಾಡಿ ನಾನಾಮತಸ್ಥರು ಅಕ್ರಮವಾಗಿ ತನ್ನನ್ನು ಸ್ತುತಿಸುವಂತೆ ಮಾಡುವ ಸರ್ವಸ್ಮಾತ್ಪರನಾದ ಪರಮಪದನಾಥನ ಪಾದಗಳಲ್ಲಿ ದಿವ್ಯಸೂರಿಗಳಿಂದ ಸಮರ್ಪಿಸಲ್ಪಟ್ಟ ಶ್ಲಾಘ್ಯವಾದ ತುಳಸಿಯು ಬೇಕೆಂದು ಈ ನನ್ನ ಸುವೃತ್ತಬಾಹುಗಳುಳ್ಳ ಕನ್ಯೆಯು ಹೇಳುತ್ತಿದಾಳೆ. (ಅನಾದಿ ಪಾಪವಶ್ಯೆಯಾದ ನಾನು ಏನುಮಾಡಲಿ?)

(೫) ತೋೞಿಶೇರ್ ಪಿನ್ನೈಕ್ಕಾ ಪೊರುಟ್ಟೆರುದೇೞ್ ತೞೀಇ
ಕ್ಕೋೞಿಯಾರ್, ಕೋವಲನಾರ್ ಕುಡಕ್ಕೂತ್ತನಾರ್,
ತಾೞಿನ್ಮೇಲಣಿ ತಣ್ಣನ್ದುೞಾಯೆನ್ಱೇ
ನಾಳುನಾಳ್ ನೈಕಿನ್ಱದಾಲೆನ್‌ತೆನ್ ಮಾದರೇ.

ಪ್ರ|| ತೋೞಿ-(ಅವನಿಗೆ ಪ್ರಿಯವಾದ) ಸುನ್ದರವಾದ ತೋಳುಗಳುಳ್ಳ, ಶೇರ್-(ಶೀಲಾದಿಗಳಿಂದ ಅವನಿಗೆ) ಸದೃಶಿಯಾದ, ಪಿನ್ನೈಕ್ಕಾ ಪೊರುಟ್ಟು-ನೀಳಾದೇವಿಗಾಗಿ, ಎರುದು ಏೞ್-ವೃಷಭಗಳು ಏಳನ್ನೂ, ತೞೀ ಇಕ್ಕೋೞಿಯಾರ್-(ಒಂದೇಕ್ಷಣದಲ್ಲಿ) ತಬ್ಬಿಕೊಂಡು ವಶೀಕರಿಸುವ ಸ್ವಭಾವವುಳ್ಳ, ಕೋವಲನಾರ್-ಗೋಪಕುಲತಿಲಕನಾದ, ಕುಡಕ್ಕೂತ್ತನಾರ್-ಘಟಲೀಲಾಪರನಾದ ಶ್ರೀಕೃಷ್ಣನ, ತಾೞಿನ್ಮೇಲ್-

ಪಾದಯುಗಳದಮೇಲೆ, ಅಣಿ-ಅಲಂಕೃತವಾದ, ತಣ್ - ಶೀತಳವಾದ, ಅಮ್-ರಮ್ಯವಾದ, ತುೞಾಯೆನ್ಱೇ - ತುಳಸಿಯೆಂದೇ, ನಾಳುಮ್ ನಾಳ್-ಪ್ರತಿದಿನವೂ (ಚಿನ್ತಿಸುತ್ತ), ಎಯ್ದಿನಳ್-ನನ್ನ (ಈ) ಮಗಳು, ನೈಕಿನ್ಱದು-ಕೃಶೆಯಾಗುತ್ತಿದಾಳೆ. (ಆಲ್-ಅಯ್ಯೋ-ಎಂದು ತನ್ನ ಸನ್ತಾಪವನ್ನು ಸೂಚಿಸುತ್ತಾಳೆ.)

( ಸ-ಗಾ-ರ || )—

ನೀಳಾಂ ಮನೋರಮಭುಜಾಮುಪಭೋಕ್ತುಕಾಮ-
ಸ್ಸಪ್ತರ್ಷಭಾನಪಿ ಚ ಯೋ ಜಿತವಾಂಶ್ಚ ಗೋಪಃ ।
ತಸ್ಯಾಂಘ್ರಿಗಾ ಘಟಭೃತಸ್ತುಲಸೀ ಶುಭೇತಿ
ಕ್ರನ್ದತ್ಯಹೋ ! ಪ್ರತಿದಿನಂ ಮಮ ಕನ್ಯಕೈಷಾ ॥

ತಾ|| (ನೀಳಾದೇವಿಗೋಸ್ಕರ ಸಪ್ತರ್ಷಭಗಳನ್ನು ಜಯಿಸಿದ, ಶ್ರೀಕೃಷ್ಣನ ಪಾದತುಳಸಿಯನ್ನು ಅಪೇಕ್ಷಿಸುತ್ತಾಳೆಂದು ಹೇಳುತ್ತಾಳೆ.) ಸುನ್ದರವಾದ ತೋಳುಗಳುಳ್ಳ ಅನುರೂಪೆಯಾದ ನೀಳಾದೇವಿಗೋಸ್ಕರ ಒಂದೇಕ್ಷಣದಲ್ಲಿ ಏಳು ವೃಷಭಗಳನ್ನೂ ತಬ್ಬಿ ಜಯಿಸಿದ ಗೋಪಕುಲತಿಲಕನಾದ (ಕುಂಭಲೀಲಾಪರನಾದ) ಶ್ರೀಕೃಷ್ಣನ ಪಾದಗಳಲ್ಲಿ ಸಮರ್ಪಿಸಲ್ಪಟ್ಟ ದಿವ್ಯತುಳಸಿಯನ್ನೇ ಯಾವಾಗಲೂ ಸ್ಮರಿಸುತ್ತ ಈ ನನ್ನ ಮಗಳು ಕೃಶೆಯಾಗುತ್ತಿದಾಳೆ. (ಏನು ಮಾಡಲಿ ? — ಎನ್ನುತ್ತಾಳೆ.)

(೬) ಮಾದರ್ ಮಾಮಣ್ಮಡನ್ದೈ ಪೊರುಟ್ಟೇನಮಾಯ್,
ಆದಿಯಞ್ಞಾಲತ್ತಕಲಿಡಮ್ ಕೀಣ್ಡವರ್,
ಪಾದಙ್ಗಳ್ ಮೇಲಣಿ ಪೈಮ್ಬೊನ್ ತುೞಾಯೆನ್ಱೇ
ಓದುಮಾಲ್, ಎಯ್ದಿನಳೆನ್ದನ್ ಮಡನ್ದೈಯೇ.

ಪ|| ಮಾದರ್-"ನಾರೀಣಾಮುತ್ತಮಾ" ಎಂಬನ್ತೆ ಸ್ತ್ರೀಗಳಲ್ಲಿ ಉತ್ತಮೆಯಾದ, ಮಾ-ಶ್ಲಾಘ್ಯೆಯಾದ, ಮಣ್ಮಡನ್ದೈ ಪೊರುಟ್ಟು-ಭೂದೇವಿಗೋಸ್ಕರ, ಏನಮಾಯ್-ವರಾಹರೂಪಿಯಾಗಿ, ಆದಿ-ಕಲ್ಪಾದಿಯಾದ, ಅಮ್-(ಪ್ರಾದುರ್ಭಾವಕ್ಕೆ) ಅನುಕೂಲವಾದ, ಕಾಲತ್ತು-ಕಾಲದಲ್ಲಿ, ಅಕಲಿಡಮ್-ವಿಸ್ತೀರ್ಣವಾದ ಪೃಥಿವಿಯನ್ನು, ಕೀಣ್ಡವರ್-(ಅಣ್ಡದಿಂದ ಬಿಡಿಸಿ) ಮೇಲಕ್ಕೆ ಎತ್ತಿಕೊಂಡು ಬಂದ ಸ್ವಾಮಿಯ, ಪಾದಙ್ಗಳ್‌ಮೇಲ್ - ಪಾದಗಳಮೇಲೆ, ಅಣಿ - ಅಲಂಕಾರವಾಗಿ

ಸಮರ್ಪಿಸಲ್ಪಟ್ಟ, ಪೈವ್ಪೊ-ಹಚ್ಚಗೆ ರಮ್ಯವಾಗಿರುವ, ತುೞಾಯೆನ್ಱೇ-ತುಳಸಿ ಯೆಂದೇ, ಓದುಮ್- (ಯಾವಾಗಲೂ) ಹೇಳುವಂತೆ, ಮಾಲ್-ಭ್ರಾನ್ತಿಯನ್ನು, ಎಯ್‌ದಿನಳ್ - ಹೊಂದಿದಾಳೆ, ಎೞ್ತಮಡನ್ದೈ - ನನ್ನ ಈ (ಸುಶೀಲೆಯಾದ) ಮಗಳು.

( ಸ-ಗಾ-ರ || )—

ನಾರೀಜನೋತ್ತಮ ಮಹಾಪೃಥಿವೀಂ ಚ ಭೋಕ್ತುಂ
ವಾರಾಹರೂಪಭೃತ ಏವ ಪುರಾ ಧರಿತ್ರೀಮ್ ।
ಅಣ್ಡಾತ್ಸಮುದ್ಧೃತವತಸ್ತುಲಸೀಂ ಪದಸ್ಥಾಂ
ಸಂಕೀರ್ತ್ಯ ಮೋಹಿತಮತಿರ್ಹಿ ಮಮಾತ್ಮಜೇಯಮ್ ||

ತಾ|| (ಭೂದೇವಿಗೋಸ್ಕರ ತಾನು ವರಾಹರೂಪಿಯಾಗಿ ಭೂಮ್ಯುದ್ಧಾರವಂ ಮಾಡಿದ ಸ್ವಾಮಿಯ ಪಾದತುಳಸಿಯನ್ನು ಇಚ್ಛಿಸುತ್ತಾಳೆಂದು ಹೇಳುತ್ತಾಳೆ.) ಸ್ತ್ರೀಜಾತಿಯಲ್ಲಿ ಉತ್ತಮೆಯಾದ ಭೂದೇವಿಗೋಸ್ಕರ ವರಾಹರೂಪಿಯಾಗಿ ಕಲ್ಪಾದಿಕಾಲದಲ್ಲಿ ವಿಸ್ತೀರ್ಣವಾದ ಪೃಥಿವಿಯನ್ನು ಅಣ್ಡದಿಂದ ಬಿಡಿಸಿ ಮೇಲಕ್ಕೆ ಎತ್ತಿಕೊಂಡು ಬಂದ ಸ್ವಾಮಿಯ ಪಾದಗಳಮೇಲೆ ಅಲಂಕರಿಸಲ್ಪಟ್ಟ ರಮ್ಯವಾದ ತುಳಸಿಯನ್ನೇ ಈ ನನ್ನ ಮಗಳು ಯಾವಾಗಲೂ ಸ್ಮರಿಸಿ ಕೂಗುತ್ತ ಭ್ರಾನ್ತೆ ಯಾಗಿದಾಳೆ.

(೭) ಮಡನ್ದೈಯ್ಯೈ ವಣ್ ಕಮಲತ್ತಿರುಮಾದಿನ್ನೈ,
ತ್ತಡಙ್ಕೊಳ್ ತಾರ್ ಮಾರ್ಬಿನಿಲ್ ವೈತ್ತವರ್ ತಾೞಿನ್ಮೇಲ್,
ವಡಙ್ಕೊಳ್ ಪೂನ್ತಣ್ಣನ್ತುೞಾಯ್ ಮಲರ್ಕ್ಕೇ ಯಿವಳ್
ಮಡಙ್ಗುಮಾಲ್, ವಾಣುದಲೀರೆನ್ಮಡಕ್ಕೊಮ್ಬೇ.

ಪ್ರ|| ಮಡನ್ದೈಯ್ಯೈ-ನಿತ್ಯಯೌವನಶಾಲಿಯಾದ, ವಣ್-ದರ್ಶನೀಯವಾದ, ಕಮಲಮ್ - ಕಮಲವನ್ನೇ ಆಶ್ರಯವಾಗಿಯುಳ್ಳ, ತಿರು - ಲಕ್ಷ್ಮಿಯೆಂಬ, ಮಾದಿನ್ನೈ-ಸರ್ವಲೋಕೇಶ್ವರಿಯಾದ ಸೌನ್ದರ್ಯಾದಿ ಗುಣಭೂಷಿತೆಯನ್ನು, ತಡಮ್ ಕೊಳ್--ವಿಸ್ತೃತವಾದ, ತಾರ್-ಮಾಲೆಗಳುಳ್ಳ, ಮಾರ್ಬಿನಿಲ್-ವಕ್ಷಸ್ಸ್ಥಲದಲ್ಲಿ, ವೈತ್ತವರ್-ಧರಿಸಿ ಇರುವ ಸರ್ವೇಶ್ವರನ, ತಾೞ್ಮೇಲ್-ಪಾದಗಳಮೇಲೆ, ವಡಮ್ ಕೊಳ್--ಮಾಲೆಯಾಗಿ ರಚಿಸಲ್ಪಟ್ಟಿರುವ, ಪೂಮ್- ದರ್ಶನೀಯವಾದ, ತಣ್ ಅಮ್ ತುೞಾಯ್‌ಮಲರ್ಕ್ಕೇ - ಶೀತಳವಾಗಿಯೂ ರಮ್ಯವಾಗಿಯೂ ಇರುವ ತುಳಸೀ

ಕುಸುಮಗುಚ್ಛವನ್ನೇ ಆಶಿಸಪಟ್ಟು, ವಾಳ್‌ನುದಲೀರ್-ಉಜ್ಜ್ವಲವಾದ ಲಲಾಟವುಳ್ಳ ಸ್ತ್ರೀಯರೇ ! ಎನ್-ನನ್ನ, ಮಡಮ್‌ಕೊಮ್ಬು-ಭವ್ಯೆಯಾದ (ವಂಜಿಕ್ಕೊಂಬಿನಂತೆ ಇರುವ) ಈ ಮಗಳು, ಮಡಙ್ಗುಮ್-(ವ್ಯಸನದಿಂದ) ಹೊರಳಾಡುತ್ತಿದಾಳೆ.(ವಂಜಿ= ವೃಕ್ಷವಿಶೇಷ.)

( ಸ-ಗಾ-ರ ॥ )—

ಪದ್ಮಾಶ್ರಯಾ ಚ ತರುಣೀ ರಮಣೀಮಣಿಶ್ರೀ-
ರ್ಯಸ್ಯಾಸ್ತಿ ವಕ್ಷಸಿ ಧೃತಾ ಸುವಿಶಾಲರಮ್ಯೇ ।
ತಸ್ಯೈವ ದಿವ್ಯಚರಣಾಂ ತುಲಸೀಂ ಪದಾಬ್ಜೇ
ಸ್ಮೃತ್ವಾಽವಸೀದತಿ ಸುತಾ ಮಮ ದೀಪ್ರಫಾಲಾ ॥

ತಾ॥ (ಅಮೃತಮಥನಮಾಡಿ ಲಕ್ಷ್ಮಿಯನ್ನು ವಕ್ಷಸ್ಸ್ಥಲದಲ್ಲಿ ಧರಿಸಿದ ಸ್ವಾಮಿಯ ಪಾದತುಳಸಿಯನ್ನು ಅಪೇಕ್ಷಿಸುತ್ತಾಳೆಂದು ಹೇಳುತ್ತಾಳೆ.) ನಿತ್ಯಯೌವನಶಾಲಿನಿಯಾಗಿ ಪದ್ಮಾಶ್ರಯೆಯಾದ ಲಕ್ಷ್ಮೀದೇವಿಯನ್ನು ತನ್ನ ವಿಶಾಲವಾದ (ಪುಷ್ಪಮಾಲಾಲಂಕೃತವಾದ) ವಕ್ಷಸ್ಸ್ಥಲದಲ್ಲಿ ಧರಿಸಿ ಇರುವ ಸ್ವಾಮಿಯ ಪಾದಗಳ ಮೇಲೆ ರಚಿಸಲ್ಪಟ್ಟಿರುವ ದಿವ್ಯ ತುಳಸೀಗುಚ್ಛವನ್ನೇ ಆಶಿಸಪಟ್ಟು ಈ ನನ್ನ ಭವ್ಯೆಯಾದ ಮಗಳು ಹೊರಳಾಡುತ್ತಿದಾಳೆ—(ಈ ದಶೆಯನ್ನು ಉಜ್ಜ್ವಲವಾದ ಲಲಾಟವುಳ್ಳ ನೀವು ನೋಡಿರಿ ಎಂದು ಹೇಳುತ್ತಾಳೆ.)

(೮) ಕೊಮ್ಬುಪೋಲ್ ಶೀದೈಪೊರುಟ್ಟಿಲಙ್ಗೈನಕರ್,
ಅಮ್ಬೆರಿಯುಯ್‌ತ್ತವನ್ ತಾಳಿಣೈಮೇಲಣಿ,
ವಮ್ಬವಿಳ್ ತಣ್ಣಮ್ತುೞಾಯ್ ಮಲರ್‌ಕ್ಕೇ ಇವಳ್
ನಮ್ಬುಮಾಲ್ ನಾನಿದಱ್ಕೆನ್ ಶೆಯ್‌ಕೇನ್ ನಙ್ಗೈಮೀರ್.

ಪ್ರ॥ ಕೊಮ್ಬುಪೋಲ್ – ವಂಜಿಕ್ಕೊಂಬಿನಂತೆ ಇರುವ ; ಶೀದೈಪೊರುಟ್ಟು-ಸೀತಾದೇವಿಗೋಸ್ಕರ, ಇಲಙ್ಗೈನಕರ್-ಲಂಕಾನಗರದಲ್ಲಿ, ಅಮ್ಬು ಎರಿ-ಶರಾಗ್ನಿಯನ್ನು, ಉಯ್‌ತ್ತವನ್-ಪ್ರವೇಶಿಸುವಂತೆ ಮಾಡಿದ ಸ್ವಾಮಿಯ, ತಾಳಿಣೈಮೇಲ್-ಪಾದಗಳಮೇಲೆ ಅಣಿ-(ಬ್ರಹ್ಮಾದಿಗಳಿಂದ) ಸಮರ್ಪಿಸಲ್ಪಟ್ಟ, ವಮ್ಬು ಅವಿೞ್-ಅಭಿನವ ಪರಿಮಳವಿಕಾಸವುಳ್ಳ, ತಣ್ ಅಮ್ ತುೞಾಯ್-ಶೀತಳವಾಗಿಯೂ ರಮ್ಯವಾಗಿಯೂ ಇರುವ ತುಳಸಿಯ, ಮಲರ್‌ಕ್ಕೇ – ಹೂವಿನಗೊಂಚಲಿಗೋಸ್ಕರವೇ, ಇವಳ್-ಇವಳು, ನಮ್ಬುಮ್-ಆಶಿಸಪಡುತ್ತಿದಾಳೆ. ನಙ್ಗೈಮೀರ್-ಪೂರ್ಣೆಗಳಾದ ಸ್ತ್ರೀಗಳೇ ! ಇದಱ್ಕು-ಈ ಅತೀತವಿಷಯದಲ್ಲಿ ಇವಳಿಗೆ ಇರುವ ಆಶೆಗೆ, ನಾನ್-ನಾನು, ಎನ್ ಶೆಯ್‌ಕೇನ್-ಏನು ಮಾಡಲಿ ?

( ಸ-ಗಾ-ರ ॥ )—

ಸೀತಾಭಿರಕ್ಷಣಧಿಯಾ ನಗರೀಂ ಚ ಲಂಕಾಂ
ದಗ್ಧ್ವಾ ಶರಾಗ್ನಿಭಿರಹೋ! ಜಗತಾಂ ಪ್ರಶಾಸ್ತುಃ ।
ದೇವಸ್ಯ ದಿವ್ಯಸುರಭಿಂ ತುಲಸೀಂ ಪದಾಬ್ಜೇ
ವಾಞ್ಛತ್ಯಸೌ ಮಮ ಸುತಾ ! ಕಿಮಿಹಾದ್ಯ ಕುರ್ಯಾಮ್? ॥

ತಾ॥ (ಸೀತಾದೇವಿಗೋಸ್ಕರ ಲಂಕಾನಗರವನ್ನು ಧ್ವಂಸಮಾಡಿದ ಸ್ವಾಮಿಯ ಪಾದತುಳಸಿಯು ಬೇಕೆಂದು ಆಶೆಪಡುತ್ತಿದಾಳೆಂದು ಹೇಳುತ್ತಾಳೆ.) ರಮಣೀಯ ವಾದ ಆಕೃತಿಯುಳ್ಳ ಸೀತಾದೇವಿಗೋಸ್ಕರ ಲಂಕಾನಗರದಲ್ಲಿ ಶರಾಗ್ನಿಯನ್ನು ವರ್ಷಿಸಿದ ಸ್ವಾಮಿಯ ಪಾದಗಳಲ್ಲಿ ಬ್ರಹ್ಮಾದಿಗಳಿಂದ ಸಮರ್ಪಿಸಲ್ಪಟ್ಟ ದಿವ್ಯ ತುಳಸೀಗುಚ್ಛವು ಬೇಕೆಂದು ಇವಳು ಆಶೆಪಡುತ್ತಿದಾಳೆ. ನಿತ್ಯಪೂರ್ಣಗಳಾದ ನಿವೇ ಹೇಳಿರಿ ! ಇವಳ ಈ ಆಶೆಗೆ ನಾನೇನು ಮಾಡಲಿ ?

(೯) ನಙ್ಗೈಮೀರ್ ನೀರುಮೋರ್ ಪೆಣ್ ಪೆಱ್ಱು ನಲ್ಕಿನೀರ್,
ಎಙ್ಙನೇ ಶೊಲ್ಲುಕೇನ್ ಯಾನ್ ಪೆಱ್ಱ ಏೞೈಯೈ
ಶಙ್ಗೆನ್ನುಮ್ ಶಕ್ಕರಮೆನ್ನುಮ್ ತುೞಾಯೆನ್ನುಮ್,
ಇಙ್ಙನೇ ಶೊಲ್ಲುಮಿರಾಪ್ಪಕಲೆನ್ ಶೆಯ್ಕೇನ್.

ಪ್ರ॥ ನಙ್ಗೈಮೀರ್–ಪರಿಪೂರ್ಣಗಳಾದ, ನೀರುಮ್–ನೀವುಗಳೂ, ಓರ್ ಪೆಣ್ ಪೆಱ್ಱು–ಒಂದು ಹೆಣ್ಣುಮಗುವನ್ನು ಹೆತ್ತು, ನಲ್ಕಿನೀರ್ – ಪ್ರೀತಿಯಿಂದ ಪೋಷಿಸಿದಿರಿ. ಯಾನ್ – ನಾನು, ಪೆಱ್ಱ – ಹೆತ್ತ, ಏೞೈಯೈ – ಚಪಲೆಯಾದ ಇವಳನ್ನು, ಎಙ್ಙನೇ ಶೊಲ್ಲುಕೇನ್–ಏನೆಂದು ವರ್ಣಿಸಲಿ ? (ಹೇಗೆ ವರ್ಣಿಸಲಿ ?). (ಸಾಧ್ಯವಾದಷ್ಟು ವರ್ಣಿಸೋಣವೆಂದರೆ)—ಶಙ್ಗು ಎನ್ನುಮ್-(ಅವನು ಧರಿಸಿರುವ) ಶಂಖವೆಂದೂ, ಶಕ್ಕರಮೆನ್ನುಮ್–ಚಕ್ರವೆಂದೂ, ತುೞಾಯೆನ್ನುಮ್ – (ಅವನ ಪಾದಗಳಲ್ಲಿರುವ) ತುಳಸಿಯೆಂದೂ, ಇರಾಪ್ಪಕಲ್ – ಅಹೋರಾತ್ರ ವಿಭಾಗವಿಲ್ಲದಂತೆ, ಇಙ್ಙನೇ–ಹೀಗೆ ಒಂದೊಂದಾಗಿ, ಶೊಲ್ಲುಮ್ – ಹೇಳುತ್ತಿದಾಳೆ. ಎನ್ ಶೆಯ್ಕೇನ್ ?—(ನಾನು) ಏನು ಮಾಡಲಿ ?

( ಸ-ಗಾ-ರ || )—

ಯೂಯಂ ಚ ಪೂರ್ಣಹೃದಯಾಸ್ತನಯಾಂ ಪ್ರಸೂಯ
ಪ್ರಾಪ್ತಾಃ ಪ್ರಹರ್ಷಮಹಮದ್ಯ ಸುತಾಂ ಚ ದೀನಾಮ್ |
ಏನಾಂ ಕಿಮಿತ್ಯಹಹ ! ವಚ್ಮಿ ? ತದೀಯಶಙ್ಖಂ
ಚಕ್ರಂ ಚ ಹನ್ತ ! ತುಲಸೀಂ ಸತತಂ ಪ್ರವಕ್ತಿ ||

ತಾ|| (ಈ ನನ್ನ ಮಗಳು ಅವನ ದಿವ್ಯಾಯುಧಗಳನ್ನೂ ಪಾದತುಳಸಿಯನ್ನೂ ಒಂದೊಂದಾಗಿ ಸ್ಮರಿಸುತ್ತಾ ರಾತ್ರಿಹಗಲು ಹೀಗೆ ಖಿನ್ನೆಯಾಗಿ ಕೂಗುತ್ತಿದಾಳೆ—ಏನು ಮಾಡಲಿ ಎಂದು ಹೇಳುತ್ತಾಳೆ.) ಪರಿಪೂರ್ಣೆಗಳಾದ ನೀವುಗಳೂ ಹೆಣ್ಣುಮಗುವನ್ನು ಹೆತ್ತು ಪೋಷಿಸಿ ಬೆಳೆಸಿ ಇರುತ್ತೀರಿ. ನಾನು ಹೆತ್ತ ಈ ಚಪಲೆಯಾದ ಮಗಳನ್ನು ಏನೆಂದು ವರ್ಣಿಸಲಿ ? (ಹೇಳಲುಪಕ್ರಮಿಸಿದರೆ) ಅವನ ಶಂಖ-ಚಕ್ರ-ಪಾದತುಳಸಿ-ಎಂದು ಒಂದೊಂದಾಗಿ ಹೇಳುತ್ತ ರಾತ್ರಿಹಗಲೂ ಹೀಗೆ ಕೂಗುತ್ತಿದಾಳೆ. ಇದಕ್ಕೆ ನಾನೇನು ಮಾಡಲಿ ?

(೧೦) ಎಞ್ಶೆಯ್‌ಕೇನೆನ್ನುಡೈ ಪ್ಪೇದೈಯೆನ್ ಕೋಮಳಮ್,
ಎಞ್ಶೊಲ್ಲುಮೆನ್ ವಶಮುಮಲ್ಲಳ್ ನಙ್ಗೈಮೀರ್,
ಮಿನ್ಶೆಯ್ ಪೂಣ್ ಮಾರ್ಬಿನನ್ ಕಣ್ಣನ್
ಕಳಲ್‌ತುಳಾಯ್,
ಪೊನ್ಶೆಯ್‌ಪೂಣ್ ಮೆನ್ಮುಲೈಕ್ಕೆನ್ಱು ಮೆಲಿಯುಮೇ

ಪ್ರ|| ನಙ್ಗೈಮೀರ್ - ಪೂರ್ಣೆಗಳಾದ ಸ್ತ್ರೀಗಳೇ !, ಎನ್ನುಡೈಯ-ನನ್ನ, ಪೇದೈ - (ಹಿತವಚನವನ್ನು ಕೇಳುವಷ್ಟು ವಯಸ್ಸಿಲ್ಲದ) ಅನಾಥೆಯಾದ, ಎನ್ ಕೋಮಳಮ್-ಅತಿ ಮೃದುಸ್ವಭಾವವುಳ್ಳ ಈ ಸುಕುಮಾರಿಯು, ಎನ್ ಶೊಲ್ಲುಮ್-ಏನುಹೇಳಿದಾಗ್ಯೂ, ಎನ್ ವಶಮುಮ್—ನನ್ನ ವಶಕ್ಕೂ, ಅಲ್ಲಳ್ - ಬರುವುದಿಲ್ಲ. ಎನ್ಶೆಯ್‌ಕೇನ್ - (ನಾನು ಇದಕ್ಕೆ) ಏನು ಮಾಡಬಲ್ಲೆನು ?, ಮಿನ್ಶೆಯ್ - ದಿವ್ಯತೇಜೋವಿಶಿಷ್ಟವಾದ, ಪೂಣ್-ಕೌಸ್ತುಭಾದ್ಯಾಭರಣ ಶೋಭಿತವಾದ, ಮಾರ್ಬಿನನ್-ವಕ್ಷಸ್ಸ್ಥಲವುಳ್ಳ, ಕಣ್ಣನ್-ಕೃಷ್ಣನ, ಕಳಲ್ - ಪಾದಗಳಲ್ಲಿರುವ, ತುಳಾಯ್-ತುಳಸಿಯನ್ನು, ಪೊನ್ ಶೆಯ್-(ವಿರಹ ವೈವರ್ಣ್ಯ) ದೋಷದಿಂದ ಕೂಡಿದ, ಪೂಣ್-ಆಭರಣಶೋಭೆಯುಳ್ಳ, ಮೆನ್ಮುಲೈಕ್ಕು-ಮೃದುವಾದ ಸ್ತನಕ್ಕೆ (ಅಲಂಕಾರವಾಗಬೇಕು), ಎನ್ಱುಮ್-ಎಂದು ಆಶೆಪಟ್ಟು, ಮೆಲಿಯುಮ್-(ಅದು ಸಿಕ್ಕದೆ) ಕೃಶೆಯಾಗುತ್ತಿದಾಳೆ.

( ಸ-ಗಾ-ರ || )—

ದೀನಾ ಮಮಾದ್ಯ ತನುಜಾ ಕಿಲ ಕೋಮಲೀಯಂ !
ವಶ್ಯಾ ನ ಮೇಽಸ್ತಿ ! ನ ಹಿತಂ ಶೃಣುತೇಽದ್ಯ ಪೂರ್ಣಾಃ ! |
ಕೃಷ್ಣಸ್ಯ ಪಾದತುಲಸೀಂ ಶುಭವಕ್ಷಸೋಽದ್ಯ
ಸ್ವೋಚ್ಚಸ್ತನಾಭರಣಮೇವ ಹಿ ವಾಞ್ಛತೀಯಮ್ ||

ತಾ|| (ಈ ನನ್ನ ಮಗಳು ನನ್ನ ಮಾತನ್ನು ಕೇಳದೆ ಹೀಗೆ ಕೃಶೆಯಾಗುತ್ತಿದಾಳೆಂದು ತಾಯಿಯು ಹೇಳುತ್ತಾಳೆ.) ಪೂರ್ಣೆಗಳಾದ ಸ್ತ್ರೀಗಳೇ ! ಕೇಳಿರಿ. ನನ್ನ ಹಿತವಚನವನ್ನು ಕೇಳದೆ ಹೀಗೆ ದುರ್ದಶೆಗೆ ಬಂದಿರುವ ನನ್ನ ಈ ಕೋಮಲಾಂಗಿಯು ಏನುಹೇಳಿದಾಗ್ಯೂ ನನ್ನ ವಶಕ್ಕೆ ಬರುವುದಿಲ್ಲ. ಇದಕ್ಕೆ ನಾನೇನು ಮಾಡಬಲ್ಲೆನು ? ದಿವ್ಯಕೌಸ್ತುಭಾದಿ ಭೂಷಣಭೂಷಿತ ವಕ್ಷಸ್ಸ್ಥಲನಾದ ಶ್ರೀಕೃಷ್ಣನ ಪಾದತುಳಸಿಯು ತನ್ನ (ವಿರಹವೈವರ್ಣ್ಯವುಳ್ಳ) ಸ್ತನತಟಕ್ಕೆ ಅಲಂಕಾರವಾಗಬೇಕೆಂದು ಆಶೆಪಟ್ಟು ಇವಳು ಹೀಗೆ ಕೃಶೆಯಾಗುತ್ತಿದಾಳೆ.

(೧೧) ಮಲಿಯುಂ ನೋಯ್ತೀರ್ಕ್ಕು ನಮ್ಕಣ್ಣನ್ ಕೞಲ್ಕಳ್ಮೇಲ್,
ಮಲಿಪುಕೞ್ ವಣ್ಕುರುಕೂರ್ ಚ್ಚಡಕೋಪನ್ ಶೊಲ್.
ಒಲಿಪುಕೞಾಯಿರತ್ತಿಪ್ಪತ್ತುಮ್ ವಲ್ಲವರ್,
ಮಲಿಪುಕೞ್ ವಾನವರ್ಕ್ಕಾವರ್ ನಱ್ಕೋವೈಯೇ.

ಪ್ರ|| ಮಲಿಯುಮ್–ಹೀಗೆ ಶಿಥಿಲರಾಗುವುದಕ್ಕೆ ಹೇತುವಾದ ನೋಯ್–ವಿರಹವ್ಯಥೆಯನ್ನು, ಪೋಕ್ಕುಮ್–ನಾಶಪಡಿಸುವ, ನಮ್ಕಣ್ಣನ್–ನಮ್ಮ (ಆಶ್ರಿತಸುಲಭನಾದ) ಶ್ರೀಕೃಷ್ಣನ, ಕೞಲ್ಕಳ್ಮೇಲ್–ಪಾದಗಳಮೇಲೆ, ಮಲಿ–(ಆಶೆಯಿಂದ) ಬೆಳೆದ, ಪುಕೞ್–ಕೀರ್ತಿಯುಳ್ಳ, ವಣ್ಕುರುಕೂರ್–ಶ್ಲಾಘ್ಯವಾದ ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್–ನಮ್ಮಾೞ್ವಾರ್, ಶೊಲ್-ರಚಿಸಿದ, ಒಲಿಪುಕೞ್-ಪ್ರಶಂಸನಾರ್ಹವಾದ ಗುಣಾತಿಶಯವುಳ್ಳ, ಆಯಿರತ್ತು-ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್–ಈ ಹತ್ತುಪದ್ಯಗಳನ್ನು, ವಲ್ಲವರ್–(ಭಾವಯುಕ್ತರಾಗಿ) ಅನುಸನ್ಧಾನಮಾಡಬಲ್ಲವರು, ಮಲಿಪುಕೞ್ – ಅಭಿವೃದ್ಧವಾದ ಭಗವದನುಭವಪ್ರಖ್ಯಾತಿಯುಳ್ಳ, ವಾನವರ್ಕ್ಕು – ಸೂರಿಗಳಿಗೆ, ನಲ್ಕೋವೈ ಆವರ್ – ದಿವ್ಯಾಲಂಕಾರಪ್ರಾಯರಾಗುವರು. (ಅವರ ಗೋಷ್ಠಿಗೆ ಭೂಷಣವಾಗುವರೆಂದು ಭಾವವು.)

( ಸ-ಗಾ-ರ || )—

ವಿಶ್ಲೇಷದುಃಖಶಮನಸ್ಯ ಪದಾಬ್ಜಸಕ್ತೈಃ
ಕೃಷ್ಣಸ್ಯ ಚಾಹ ಕುರುಕಾಧಿಪತಿಶ್ಶಠಾರಿಃ |
ಸಾಹಸ್ರಮುತ್ತಮಗುಣಂ ದಶಕಂ ತದೇತ-
ದ್ಭಕ್ತಾಃ ಪಠನ್ತಿ ಯದಿ ಯಾನ್ತಿ ಚ ಸೂರಿಗೋಷ್ಠೀಮ್ ||

ತಾ|| (ಈ ದಶಕವನ್ನು ಅಭ್ಯಸಿಸುವವರು ನಿತ್ಯಸೂರಿ ಗೋಷ್ಠಿಗೆ ಭೂಷಣವಾಗುವರೆಂದು ಫಲವನ್ನು ಸೂಚಿಸುತ್ತಾರೆ.) ಭಕ್ತರ ವಿರಹವ್ಯಥೆಯನ್ನು ನಾಶಪಡಿಸುವ ಶ್ರೀಕೃಷ್ಣನ ಪಾದಗಳಲ್ಲೇ ಅತಿಪ್ರೇಮದಿಂದ ಬೆಳೆದ ಕೀರ್ತಿಯುಳ್ಳ ಶ್ರೀ ಕುರುಕಾಪುರೀಶ್ವರರಾದ ಶಠಾರಿಮುನಿವರ್ಯರಿಂದ ರಚಿತವಾದ (ಉತ್ಕೃಷ್ಟವಾದ) ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಬಲ್ಲವರು ದಿವ್ಯಸೂರಿಗೋಷ್ಠಿಗೆ ಭೂಷಣಪ್ರಾಯರಾಗುವರು.

( ದ್ರ-ಉ-ಸಂ || )—

ತಂ ಪೂರುಷಾರ್ಥಮಿತರಾರ್ಥರುಚೇರ್ನಿವೃತ್ತ್ಯಾ
ಸಾನ್ದ್ರಸ್ಪೃಹಾಸಮಯದೇಶವಿದೂರಗಂ ಚ |
ಈಪ್ಸುಶ್ಶುಚಾ ತದನವಾಪ್ತಿಭುವಾ ದ್ವಿತೀಯೇ
ಸ್ತ್ರೀಭಾವನಾಂ ಸಮಧಿಗಮ್ಯ ಮುನಿರ್ಮುಮೋಹ ||

( ದ್ರ-ಉ-ತಾ-ರ || )—

ಶೈತ್ಯಾತ್ಸೌಗನ್ಧ್ಯಭೂಮ್ನಾ ರುಚಿರುಚಿರತಯಾ ಪ್ರೋಷಣಾದಾಭಿರೂಪ್ಯಾತ್
ಸನ್ದರ್ಭಾತ್ಪುಷ್ಪಜಾಗ್ರನ್ಮಹಿತತುಲಸಿಕಾಮಾಲಯಾ ಶಶ್ವತಶ್ಚ |
ಚಕ್ರಾಧೀಶಸ್ಯ ಯೋಗಾದ್ವಟದಳಶಯನಾದ್ಯರ್ಹಣೀಯಾಪದಾನ್ಯೈ-
ಸ್ಸಮ್ಪನ್ನಾನೇಕಭೋಗ್ಯಂ ನಿರವಿಶದಜಿತಂ ಕೃಷ್ಣಮೂರ್ತಿಂ ಶಠಾರಿಃ ||

(ಈ ದ್ವಿತೀಯದಶಕದ ಸಾರಾಂಶ)—

ಈ ಎರಡನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು—ಇತರ ಪುರುಷಾರ್ಥಗಳನ್ನು ಬಿಟ್ಟು ಭೋಗ್ಯತಮವಾದ ಸಾಕ್ಷಾತ್ಪರಮ ಪುರುಷನ ಪಾದತುಳಸಿಯನ್ನೇ ಅಪೇಕ್ಷಿಸುತ್ತ—ಅತೀತವಾಗಿಯೂ ದೂರವರ್ತಿಯಾಗಿಯೂ ಇರುವ ವಟಪತ್ರಶಾಯಿ— ಗೋಪೀವಲ್ಲಭ—ತ್ರಿವಿಕ್ರಮಾವತಾರ—

ಪರಮಪದನಾಥ—ನೀಳಾವಲ್ಲಭ—ವರಾಹಾವತಾರ—ಅಮೃತಮಥನ—ರಾಮಾವತಾರ ಮುಂತಾದ ಪೂರ್ವಚರಿತ್ರಗಳನ್ನೇ ಸ್ಮರಿಸುತ್ತ ಆ ಕಾಲದ ಭಗವನ್ತನ ಪಾದತುಳಸಿಯು ಬೇಕೆಂದು ಅತ್ಯನ್ತ ಖಿನ್ನೆಯಾಗುತ್ತಿದಾಳೆಂದು ಈ ನಾಯಕಿಯ ಜನನಿಯು ಹೇಳುವ ಮಾತುಗಳನ್ನು ಅನುವದಿಸಿ, ಈ ದಶಕದ ಪಠನವಂ ಮಾಡಬಲ್ಲವರು ನಿತ್ಯಸೂರಿಗೋಷ್ಠಿಗೆ ಅಲಂಕಾರಪ್ರಾಯರಾಗುವರೆಂದು ವರ್ಣಿಸಿ ಇರುತ್ತಾರೆ.

ಶ್ರೀಃ

# ಚತುರ್ಥ ಶತಕದಲ್ಲಿ—ತೃತೀಯದಶಕ.

(ಕೋವೈವಾಯಾಳ್—)

(ಈ ದಶಕದಲ್ಲಿ--ಶ್ರೀ ಶಠಾರಿಮುನಿವರ್ಯರು ಭಗವನ್ತನ ಅವತಾರಗಳ ದರ್ಶನ ದಿಂದ ಸನ್ತುಷ್ಟರಾಗಿ ತತ್ಸಂಶ್ಲೇಷವಂ ಹೊಂದಿ ತಮ್ಮ ಸರ್ವೇನ್ದ್ರಿಯ ಗಳನ್ನೂ ಸರ್ವವಸ್ತುಗಳನ್ನೂ ತದ್ವಿಷಯದಲ್ಲಿ ಸಮರ್ಪಿಸುತ್ತಾರೆ.)

(೧) ಕೋವೈವಾಯಾಳ್ ಪೊರುಟ್ಟೇಱ್ಱಿ ನೆರುತ್ತಮಿಱುತ್ತಾಯ್,
ಮದಿಳಿಲಙ್ಗೈ-
ಕ್ಕೋವೈವೀಯ ಚ್ಚಿಲೈಕುನಿತ್ತಾಯ್ ಕುಲನಲ್
ಯಾನೈಮರುಪ್ಪೊಶಿತ್ತಾಯ್,
ಪೂವೈವೀಯಾ ನೀರ್ತೂವಿಪ್ಪೋದಾಲ್
ವಣಙ್ಗೇನೇಲುಮ್, ನಿನ್
ಪೂವೈವೀಯಾ ಮೇನಿಕ್ಕು ಪ್ಪೂಶುಂ ಶಾನ್ದೆನ್ನೆಞ್ಜಮೇ.

ಪ್ರ॥ ಕೋವೈವಾಯಾಳ್ ಪೊರುಟ್ಟು – ಬಿಂಬೋಷ್ಠಿಯಾದ ನೀಳಾದೇವಿ ಗೋಸ್ಕರ, ಏಱ್ಱಿ–ಎತ್ತುಗಳ, ಎರುತ್ತಮ್–ಕತ್ತನ್ನು, ಇಱುತ್ತಾಯ್- ಮುರಿದವನೇ; ಮದಿಳ್–ಪ್ರಾಕಾರಗಳುಳ್ಳ, ಇಲಙ್ಗೈ-ಲಂಕಾನಗರದ, ಕೋವೈ-ರಾಜನಾದ ರಾವಣನನ್ನು, ವೀಯ – ನಾಶಪಡಿಸುವಂತೆ, ಶಿಲೈ–ಧನುಸ್ಸನ್ನು, ಕುನಿ

ತ್ತಾಯ್–ಬಗ್ಗಿಸಿದವನೇ (ಬಾಣಪ್ರಯೋಗವಂ ಮಾಡಿದವನೇ); ಕುಲಮ್-ಜಾತಿ ವೈಲಕ್ಷಣ್ಯವನ್ನೂ, ನಲ್-ಲಕ್ಷಣ ವೈಲಕ್ಷಣ್ಯವನ್ನೂ ಉಳ್ಳ, ಯಾನೈ-ಕುವಲಯಾ ಪೀಡವೆಂಬ ಆನೆಯ, ಮರುಪ್ಪು-ಕೊಂಬನ್ನು, ಒಶಿತ್ತಾಯ್–ಮುರಿದವನೇ; (ಈ ಪ್ರಕಾರ ಆಶ್ರಿತರಿಗೆ ವಿರೋಧಿಗಳನ್ನು ನಾಶಮಾಡಿದ ನಿನ್ನನ್ನು), ಪೂವೈ–ಪುಷ್ಪ ವನ್ನೂ, ವೀಯಾ - ಸನ್ತತಧಾರೆಯಾದ, ನೀರ್ - ಜಲವನ್ನೂ, ತೂವಿ-ಚೆಲ್ಲಿ, ಪೋದು-ಉಕ್ತಕಾಲಗಳಲ್ಲಿ, ವಣಙ್ಗೇನೇಲುಮ್-ನಾನು ನಮಸ್ಕರಿಸದೆ ಇದ್ದರೂ, ನೀ–ನಿನ್ನ, ಪೂವೈವೀಯಾಮ್–ಪೂವೈ (ಅತಸೀಜಾತಿ) ಹೂವಿನ ನೀಲಬಣ್ಣವುಳ್ಳ, ಮೇನಿಕ್ಕು–ದಿವ್ಯಶರೀರಕ್ಕೆ, ಪೂಶುಮ್ – ಲೇಪಮಾಡುವುದಕ್ಕೆ ತಕ್ಕ, ಶಾನ್ದು– ಗನ್ಧವು (ಚನ್ದನವು), ಎನ್ ನೆಞ್ಜಮೇ–ನನ್ನ ಮನಸ್ಸೇ.

( ಸ–ಗಾ–ರ || )—

ಬಿಂಬೋಷ್ಠೀಮುಪಲಬ್ಧುಮೇವ ವೃಷಭಧ್ವಂಸೀ ಚ ಲಂಕೇಶಿತು–
ರ್ಹನ್ತಾ ತ್ವಂ ಕಿಲ ಮತ್ತಹಸ್ತಿದಶನಧ್ವಂಸೀ ಹರಿಶ್ಯಾಮಧರಃ |
ನಾಹಂ ತ್ವಾಂ ಕುಸುಮೈರ್ಜಲೈರುಪಚರನ್ನಾರಾಧ್ಯ ಧನ್ಯೋಽಸ್ಮ್ಯಹೋ
ಚಿತ್ತಂ ಮೇಽಸ್ತ್ಯತಸೀಸುಮಾಯಿತತನೋಸ್ತೇಽದ್ಯಾಙ್ಗರಾಗಾಯಿತಮ್ ||

ತಾ|| (ಆಶ್ರಿತರಿಗೆ ವಿರೋಧಿಗಳನ್ನೆಲ್ಲಾ ಧ್ವಂಸಮಾಡಿದ ನಿನ್ನನ್ನು ನಾನು ಪೂಜಿಸದೆ ಇದ್ದರೂ ನನ್ನ ಮನಸ್ಸನ್ನು ನೀನು ಚನ್ದನದಂತೆ ಸ್ವೀಕರಿಸಿ ಭೋಗ್ಯ ಮಾಡಿಕೊಂಡಿರುತ್ತೀಯೆ—ಎನ್ನುತ್ತಾರೆ.) ನೀಳಾದೇವಿಗೋಸ್ಕರ ಸಪ್ತವೃಷಭ ಗಳನ್ನೂ, ಸೀತಾದೇವಿಗೋಸ್ಕರ ಲಂಕಾನಗರದ ರಾಜನನ್ನೂ, ಕುವಲಯಾಪೀಡದ ಕೊಂಬುಗಳನ್ನೂ ನಾಶಮಾಡಿದವನೇ! ಪುಷ್ಪತೀರ್ಥಾದಿಗಳಿಂದ ನಿನ್ನನ್ನು ನಾನು ಆರಾಧಿಸಿ ನಮಸ್ಕರಿಸದೆ ಇದ್ದರೂ, ನೀನು ನನ್ನ ಮನಸ್ಸನ್ನು ನಿನ್ನ ನೀಲವರ್ಣ ವಾದ ದಿವ್ಯಶರೀರಕ್ಕೆ ಚನ್ದನದಂತೆ ಭೋಗ್ಯವಾಗುವಂತೆ ಸ್ವೀಕರಿಸಿ ಇರುತ್ತೀಯೆ. (ನಿನ್ನ ಪ್ರೀತಿಯು ನನ್ನಲ್ಲಿ ಎಷ್ಟುಮಟ್ಟಿಗೆ ಇದೆಯೆಂದು—ವಿಸ್ಮಿತರಾಗುತ್ತಾರೆ.)

(೨) ಪೂಶುಂ ಶಾನ್ದೆನ್ನೆಞ್ಜಮೇ ಪುನೈಯುಮ್ ಕಣ್ಣಿ
ಯೆನದುಡೈಯ,
ವಾಶಕಮ್ ಶೆಯ್ ಮಾಲೈಯೇ ವಾನ್
ಪಟ್ಟಾಡೈಯುಮ್ ಅ್ಃ ದೇ.
ತೇಶಮಾನ ವಣಿಕಲನುಮ್ ಕೈಕೂಪ್ಪುಚ್ಚೆಯ್ ಕೈಯೇ,
ಈಶನ್ ಞಾಲಮುಣ್ಡುಮಿೞ್ನ್ದ ವೆನ್ದೈ ಯೇಕಮೂರ್ತಿಕ್ಕೇ.

ಪ್ರ|| ಈಶ—ನಿರುಪಾಧಿಕನಿಯಾಮಕನಾದ, ಞಾಲಮ್ ಉಣ್ಡುಮಿೞ್ನ್ದ—ಸಕಲಲೋಕಗಳನ್ನೂ ಭಕ್ಷಿಸಿ ಪುನಃ ಸೃಷ್ಟಿಮಾಡಿದ, ಎನ್ದೈ—ನಮ್ಮಸ್ವಾಮಿಯಾದ, ಏಕಮೂರ್ತಿಕ್ಕೇ—ಅದ್ವಿತೀಯವಾದ ದಿವ್ಯಶರೀರವುಳ್ಳವನಿಗೇ, ಪೂಶುಮ್ – ಲೇಪ ಮಾಡಲು ಯೋಗ್ಯವಾದ, ಶಾನ್ದು-ಚನ್ದನವು, ಎನ್ ನೆಞ್ಜಮ್-ನನ್ನ ಮನಸ್ಸು ; ಪುನೈಯುಮ್-ಧರಿಸಲು ತಕ್ಕ, ಕಣ್ಣಿ—ಪುಷ್ಪಮಾಲೆಯು, ಎನದುಡೈಯ-ನನ್ನ, ವಾಶಕಮ್—ವಾಕ್ಯರೂಪವಾಗಿ, ಶೆಯ್-ರಚಿಸಲ್ಪಟ್ಟ, ಮಾಲೈ-ಮಾಲೆಯು ; ವಾನ್—ಶ್ಲಾಘ್ಯವಾದ, ಪಟ್ಟಾಡೈಯುಮ್-ಪೀತಾಂಬರವೂ, ಅ∴ ದೇ-ಆವಾಕ್ಯಮಾಲೆಯೇ. ತೇಶಮಾನ—ತೇಜಸ್ಕರವಾದ, ಅಣಿ—ಅಲಂಕಾರರೂಪವಾದ, ಕಲನುಮ್—ಆಭರಣವೂ, ಎನ್—ನನ್ನ, ಕೈಕೂಪ್ಪುಚ್ಚೆಯ್‌ಕೈಯೇ—ಅಂಜಲಿಬನ್ಧವೇ.

( ಸ-ಗಾ-ರ || )—

ಈಶಸ್ಯಾಪಿ ಜಗತ್ತ್ರಯಾವನಕೃತಶ್ಚಾಪ್ಯೇಕಮೂರ್ತೇಃ ಪ್ರಭೋ-
ರಸ್ಮಾಕಂ ತವ ದಿವ್ಯಗನ್ಧಮಪಿ ಮೇ ಚಿತ್ತಂ ಸ್ರಜಂ ವಾಕ್ತತಿಮ್ |
ವಸ್ತ್ರಂ ತೇ ಮಮ ಸೂಕ್ತಿಮೇವ ಕಿಲ ತಾಂ ಭೂಷಾಂ ಚ ದಿವ್ಯಾಂ ತವ
ಶ್ರೀಶಸ್ಯಾಞ್ಜಲಿಬನ್ಧಮೇವ ಮಮ ಭೋ! ಜಾನೀಹಿ ಭೋಗ್ಯಂ ತ್ರಯಮ್||

ತಾ|| (ನನ್ನ ಕರಣತ್ರಯವೂ ಸರ್ವೇಶ್ವರನಾದ ಭಗವನ್ತನಿಗೆ ಭೋಗ್ಯವಾಗಿದೆಯೆಂದು ಹೇಳುತ್ತಾರೆ.) ಸರ್ವಲೋಕ ನಿಯಾಮಕನಾಗಿಯೂ ಸರ್ವ ಜಗದ್ರಕ್ಷಕನಾಗಿಯೂ ಇರುವ ಅದ್ವಿತೀಯ ಮೂರ್ತಿಯಾದ ನಮ್ಮ ಸ್ವಾಮಿಗೆ ನನ್ನ ಮನಸ್ಸು ಚನ್ದನವಾಗಿಯೂ, ನನ್ನ ವಾಕ್ಯಮಾಲೆಯು ಪುಷ್ಪಮಾಲೆಯಾಗಿಯೂ ಪೀತಾಂಬರವಾಗಿಯೂ, ನನ್ನ ಅಂಜಲಿಬನ್ಧವೇ ಆಭರಣವಾಗಿಯೂ ಪ್ರಕಾಶಿಸುತ್ತಿವೆ.

(೩) ಏಕಮೂರ್ತ್ತಿ ಯಿರುಮೂರ್ತ್ತಿ ಮೂನ್ಱುಮೂರ್ತ್ತಿ
ಪಲಮೂರ್ತ್ತಿ

ಯಾಕಿ, ಐನ್ದು ಪೂದಮಾಯಿರಣ್ಡು ಶುಡರಾಯರುವಾಕಿ,
ನಾಕಮೇಱಿ ನಡುಕ್ಕಡಲುಳ್ ತುಯಿನ್ಱ ನಾರಾಯಣನೇ, ಉನ್
ಆಕಮುಱ್ಱುಮಕತ್ತಡಕ್ಕಿ ಯಾವಿಯಲ್ಲಲ್ ಮಾಯ್‌ತ್ತದೇ.

ಪ್ರ|| ಏಕಮೂರ್ತ್ತಿ-ಜಗತ್ಕಾರಣವಸ್ತುವಾಗಿ ಒಂದೇ ಅವ್ಯಕ್ತರೂಪವುಳ್ಳವನಾಗಿಯೂ, ಇರುಮೂರ್ತ್ತಿ – ಸೃಷ್ಟಿಯಲ್ಲಿ ಮಹದಹಂಕಾರಗಳೆಂಬ ಎರಡು ವಿಕಾರಗಳುಳ್ಳ ರೂಪವುಳ್ಳವನಾಗಿಯೂ, ಮೂನ್ಱುಮೂರ್ತ್ತಿ- ಸತ್ತ್ವರಜಸ್ತಮೋ

ರೂಪಗುಣತ್ರಯ ವೈಷಮ್ಯವನ್ನು ತನ್ನ ಸೃಷ್ಟಿಯಲ್ಲಿ ತೋರಿಸುವವನಾಗಿಯೂ, ಪಲಮೂರ್ತ್ತಿಯಾಕಿ - ಏಕಾದಶೇನ್ದ್ರಿಯಾದಿ ಬಹುರೂಪವುಳ್ಳವನಾಗಿಯೂ, ಐನ್ದುಪೂದವಾಯ್-ಪಂಚಭೂತಾತ್ಮಕನಾಗಿಯೂ, ಇರಣ್ಡುಶುಡರಾಯ್-ಸೂರ್ಯ ಚನ್ದ್ರರೆಂಬ ಎರಡುವಿಧವಾದ ಜ್ಯೋತಿಸ್ಸ್ವರೂಪನಾಗಿಯೂ, ಅರುವಾಕಿ-ಅವುಗಳಿಗೆಲ್ಲಾ ಅನ್ತರಾತ್ಮನಾಗಿ ಸೂಕ್ಷ್ಮರೂಪನಾಗಿಯೂ ಇದ್ದು (ಹೀಗೆ ಸೃಷ್ಟವಾದ ಪ್ರಪಂಚದ ರಕ್ಷಣಾರ್ಥವಾಗಿ), ನಾಕಮ್ ಏಱಿ-ಆದಿಶೇಷನಮೇಲೆ ಹತ್ತಿ, ನಡುಕ್ಕಡಲುಳ್-ಕ್ಷೀರಾಬ್ಧಿಮಧ್ಯದಲ್ಲಿ, ತುಯಿನ್ಱ-ಶಯನಮಾಡಿರುವ, ನಾರಾಯಣನೇ - (ಅನ್ತರಾತ್ಮತ್ವ-ಸಮುದ್ರಶಾಯಿತ್ವಗಳಿಂದ ಸಿದ್ಧವಾದ) ನಾರಾಯಣ ನಾಮಧೇಯವುಳ್ಳವನೇ, ಉನ್-ನಿನ್ನ, ಆಕಮ್-ಶರೀರವನ್ನು, ಮುಱ್ಱುಮ್-ಸಕಲಾಲಂಕಾರ ಸೌನ್ದರ್ಯಾದಿಗಳನ್ನೂ, ಅಕತ್ತು-(ನನ್ನ) ಮನಸ್ಸಿನಲ್ಲಿ, ಅಡಕ್ಕಿ-ಧ್ಯಾನದಿಂದ ಕಬಳೀಕರಿಸಿ ಅನುಭವಿಸಿ, ಆವಿ-ನನ್ನ ಆತ್ಮವಸ್ತುವು, ಅಲ್ಲಲ್-(ಹಿಂದಿನ ದಶಕದಲ್ಲಿ ಹೇಳಿದ) ದುಃಖವನ್ನೆಲ್ಲಾ, ಮಾಯ್ತ್ತದೇ-ನಾಶಪಡಿಸಿತಷ್ಟೆ !

( ಸ-ಗಾ-ರ || )—

ಮೂರ್ತಿಶ್ಚೈಕವಿಧಾ ದ್ವಿಧಾಽಪಿ ಕಿಲ ಸಾ ತ್ರೇಧಾಽಪ್ಯನೇಕಾತ್ಮಿಕಾ
ಭೂತಾನಾಮಪಿ ಪಞ್ಚಕಂ ಶಶಿರವೀ ಚ ತ್ವಂ ಹಿ ಸೂಕ್ಷ್ಮಾನ್ತರಃ |
ದುಗ್ಧಾಬ್ಧೌ ಶಯಿತಶ್ಚ ಶೇಷಶಯನೋ ನಾರಾಯಣೋಽಪಿ ಸ್ವಯಂ
ಭುಕ್ತ್ವೇದಂ ಸಕಲಂ ಚ ತನ್ಮನು ಮನಸ್ಯಾತ್ಮಾಽಸ್ಮಿ ನಿರ್ದುಃಖಭಾಕ್||

ತಾ|| (ನಿನ್ನ ಸರ್ವಾತ್ಮಕತ್ವದಿಂದ ಪ್ರಪಂಚಗಳನ್ನೆಲ್ಲಾ ಶರೀರವಾಗಿಯುಳ್ಳ ನಿನ್ನ ನಾರಾಯಣತ್ವದ ಸೌನ್ದರ್ಯವನ್ನು ಅನುಭವಿಸಿ ನಾನು ದುಃಖರಹಿತನಾಗಿದೇನೆಂದು ಹೇಳುತ್ತಾರೆ.) ಜಗತ್ಕಾರಣವಸ್ತುವಾದ ಅವ್ಯಕ್ತರೂಪನಾಗಿಯೂ, ಮಹದಹಂಕಾರರೂಪನಾಗಿಯೂ, ಗುಣತ್ರಯ ವಿಕಾರವಿಶಿಷ್ಟನಾಗಿಯೂ, ಏಕಾದಶೇನ್ದ್ರಿಯಾದಿ ಬಹುರೂಪವುಳ್ಳವನಾಗಿಯೂ, ಪಂಚಭೂತಾತ್ಮಕನಾಗಿಯೂ, ಸೂರ್ಯಚನ್ದ್ರಾತ್ಮಕ ದ್ವಿವಿಧತೇಜೋಮೂರ್ತಿಯಾಗಿಯೂ, ಸರ್ವಾನ್ತರ್ಯಾಮಿಯಾಗಿಯೂ, ಕ್ಷೀರಾಬ್ಧಿಯಲ್ಲಿ ಅನನ್ತಶಾಯಿಯಾಗಿಯೂ ಇರುವ ನಾರಾಯಣನೇ ! ನಿನ್ನ ದಿವ್ಯಶರೀರಾಲಂಕಾರ ಸೌನ್ದರ್ಯಾದ್ಯನುಭವದಿಂದ ನಾನು ಈಗ ದುಃಖರಹಿತನಾಗಿದೇನೆ.

(೪) ಮಾಯ್ತ್ತಲೆಣ್ಣಿ ವಾಯ್ಮುಲೈತನ್ದ ಮಾಯಪ್ಪೇಯುಯಿರ್
ಮಾಯ್ತ್ತ, ಆಯ ಮಾಯನೇ ವಾಮನನೇ ಮಾದವಾ,
ಪೂತ್ತಣ್ಮಾಲೈಕೊಣ್ಡುನ್ನೈ ಪ್ಪೋದಾಲ್
ವಣಙ್ಗೇನೇಲುಮ್, ನಿನ್
ಪೂತ್ತಣ್ಮಾಲೈನೆಡುಮುಡಿಕ್ಕುಪ್ಪುನೈಯುಙ್ಕಣ್ಣಿ
ಯೆನದುಯಿರೇ.

ಪ್ರ॥ ಮಾಯ್ತ್ತಲ್ ಎಣ್ಣಿ – ಕೊಲ್ಲಬೇಕೆಂದು ಆಲೋಚಿಸಿ, ವಾಯ್–(ಶಿಶುವಿನ) ಬಾಯಿಯಲ್ಲಿ, ಮುಲೈತನ್ದ–ಸ್ತನವನ್ನು ಇಟ್ಟ, ಮಾಯಮ್–(ತಾಯಿಯಂತೆ ವೇಷವನ್ನು ಧರಿಸಿ) ವಂಚನೆಮಾಡುತ್ತಿರುವ, ಪೇಯ್–(ಪೂತನೆಯೆಂಬ) ಕಪಟರಾಕ್ಷಸಿಯ, ಉಯಿರ್ಮಾಯ್ತ್ತ–ಪ್ರಾಣವನ್ನು ನಾಶಪಡಿಸಿದ, ಆಯ–ಗೋಪಾಲಕುಲತಿಲಕನಾದ, ಮಾಯನೇ–ಆಶ್ಚರ್ಯಭೂತನೇ, ವಾಮನನೇ–(ಸಕಲ ಲೋಕ ವಶೀಕಾರವಂಮಾಡಿದ) ವಾಮನಮೂರ್ತಿಯೇ, ಮಾದವಾ – ಶ್ರಿಯಃಪತಿಯೇ, ಉನ್ನೈ–ನಿನ್ನನ್ನು, ಪೂ ತಣ್ ಮಾಲೈ–ಪುಷ್ಪಭರಿತವಾಗಿ ಶೀತಳವಾದ ಮಾಲೆಗಳನ್ನು, ಕೊಣ್ಡು–ತಂದು, ಪೋದಾಲ್–ಅವಸ್ಥಾನುರೂಪವಾಗಿ (ಕಾಲಕ್ಕೆ ತಕ್ಕಂತೆ), ವಣಙ್ಗೇನೇಲುಮ್ – (ನಾನು) ನಮಸ್ಕರಿಸದೆ ಇದ್ದರೂ, ನಿನ್–ನಿನ್ನ, ಪೂತಣ್ಮಾಲೈ–ಪುಷ್ಪಭರಿತವಾಗಿ ಭೋಗ್ಯವಾದ ಮಾಲೆಗಳಿಂದ ಅಲಂಕೃತವಾದ, ನೆಡುಮುಡಿಕ್ಕು – ಉನ್ನತಪದವಿಯ ಸಾಮ್ರಾಜ್ಯಸೂಚಕವಾದ ಕಿರೀಟಕ್ಕೆ, ಪುನೈಯುಮ್–ಅಲಂಕಾರವಾಗಿ ಧರಿಸುವ, ಕಣ್ಣಿ–ಮಾಲೆಯು, ಎನದು ಉಯಿರೇ–ನನ್ನ ಪ್ರಾಣವೇ !

( ಸ–ಗಾ–ರ || )—

**ಹತ್ವಾ ಚ ಸ್ತನದಾಯಿನೀಂ ಕಿಲ ಭವಾನ್ಮಾಯಾವಿನೀಂ ಮಾಯಯಾ**
**ಗೋಪಾಲೋಽಪಿ ಚ ವಾಮನೋಽಪಿ ಚ ಭವಾನಾಸೀತ್ಸ್ವಯಂ ಮಾಧವಃ |**
**ತ್ವಾಂ ನಾರಾಧ್ಯ ಕೃತೀ ಕಿಲಾಸ್ಮಿ ಭಗವನ್ನದ್ಯಾಸ್ತಿ ಧನ್ಯಾ ತ್ವಿಯಂ**
**ಭೂಷಾ ಶ್ರೀಮಕುಟಸ್ಯ ತೇ ಮಮ ವಿಭೋ ! ಪ್ರಾಣಾತ್ಮಿಕಾ ಮಾಲಿಕಾ ||**

ತಾ|| (ಪೂತನೆಯೆಂಬ ವಂಚಕವೇಷವುಳ್ಳ ರಾಕ್ಷಸಿಯನ್ನು ಧ್ವಂಸಮಾಡಿದ ಗೋಪಕುಲತಿಲಕನೇ ! ವಾಮನನೇ ! ಮಾಧವನೇ ! ನಿನ್ನನ್ನು ನಾನು ತಕ್ಕಂತೆ ಸಕಾಲದಲ್ಲಿ ಆರಾಧಿಸದೆ ಇದ್ದರೂ ನಿನ್ನ ದಿವ್ಯಕಿರೀಟಕ್ಕೆ ನನ್ನ ಪ್ರಾಣವು ಈಗ ಮಾಲೆಯಂತೆ ಅಲಂಕಾರ ರೂಪವಾಗಿದೆಯಷ್ಟೆ ! (ನೀನು ಹೀಗೆ ನನ್ನ ಪ್ರಾಣವನ್ನು ವಶೀಕರಿಸಿ ಇರುತ್ತೀಯೆ—ಎಂದು ಭಾವವು.)

(೫) ಕಣ್ಣಿಯೆನದುಯಿರ್ ಕಾದಲ್ ಕನಕಚ್ಚೋದಿ ಮುಡಿಮುದಲಾ
ಎಣ್ಣಿಲ್ ಪಲ್‌ಕಲನ್ ಕಳುಮೇಲುಮಾಡೈಯುಮ್ .:. ದೇ,
ನಣ್ಣಿ ಮೂವುಲಕುಮ್ ನವಿಱ್‌ಱುಮ್ ಕೀರ್ತ್ತಿಯುಮ್ .:. ದೇ
ಕಣ್ಣನೆಮ್ಬಿರಾನೆಮ್ಮಾನ್ ಕಾಲಶಕ್ಕರತ್ತಾನುಕ್ಕೇ

ಪ್ರ|| ಕಾಲಮ್-ಕಾಲಕ್ಕೆ ನಿರ್ವಾಹಕವಾದ, ಶಕ್ಕರತ್ತಾನ್ – ಚಕ್ರವನ್ನು ಧರಿಸಿರುವ, ಎಮ್ಮಾನ್–ನಮ್ಮ ಸ್ವಾಮಿಯಾದ, ಎಮ್‌ಪಿರಾನ್–ನಮ್ಮ ಮಹೋಪಕಾರಕನಾದ, ಕಣ್ಣನುಕ್ಕು - ಶ್ರೀಕೃಷ್ಣನಿಗೆ, ಎನದು – ನನ್ನದಾದ (ನನ್ನ ಅಭಿಮಾನಕ್ಕೆ ಸೇರಿದ), ಉಯಿರ್–ಆತ್ಮವಸ್ತುವು, ಕಣ್ಣಿ – ಮಾಲೆಯಾಗಿರುವುದು. ಕಾದಲ್-ನನ್ನ ಪ್ರೇಮವು, ಕನಕಮ್-ಸುವರ್ಣಮಯವಾಗಿ, ಶೋದಿ-ಔಜ್ಜ್ವಲ್ಯವುಳ್ಳ, ಮುಡಿಮುದಲಾ-ಕಿರೀಟ ಮೊದಲಾದ, ಎಣ್ ಇಲ್ ಪಲ್-ಅಸಂಖ್ಯಾತವಾಗಿ ಅನೇಕವಿಧವಾದ, ಕಲನ್‌ಕಳುಮ್–ಆಭರಣಗಳಾಗಿರುವುದು. ಏಲುಮ್–ಅನುರೂಪವಾದ, ಆಡೈಯುಮ್–ಪೀತಾಂಬರವೂ, ಅ.:. ದೇ–ಅದೇ ಆಗಿರುವುದು. ಮೂವುಲಕುಮ್–(ಬದ್ಧ-ಮುಕ್ತ-ನಿತ್ಯರೆಂಬ) ತ್ರಿವಿಧವಾದ ಆತ್ಮವರ್ಗಗಳೂ, ನಣ್ಣಿ–ಸಮೀಪಿಸಿ, ನವಿಱ್‌ಱುಮ್ – (ಬಾಯಿಂದ) ಅತ್ಯಾಶೆಯೊಡನೆ ಅಪೇಕ್ಷಿಸುವ, ಕೀರ್ತ್ತಿಯುಮ್-ಕೀರ್ತ್ತಿಯೂ, ಅ.:. ದೇ-ಅದೇ. (ಇವರ ಪ್ರೇಮಾತಿಶಯಕ್ಕೆ ಭಗವಂತನು ಪಾತ್ರನಾಗಿ ತನಗೆ ಭೋಗ್ಯವಾದ ಸರ್ವವೂ ಅದೇ ಎಂದು ಭಾವಿಸಿರುವನೆಂದು ಭಾವವು.)

( ಸ–ಗಾ–ರ || )—

**ಆತ್ಮಾ ಮೇ ನನು ಮಾಲಿಕಾ ಮಮ ವಿಭೋಃ ಕೃಷ್ಣಸ್ಯ ಕಾಲೇಶಿತು–**
**ರ್ವಿಷ್ಣೋಶ್ಚಕ್ರಭೃತೋಽಸ್ತಿ ಭಕ್ತಿರಪಿ ಮೇ ಮೌಳ್ಯಾದಿಭೂಷಾಮಯೀ |**
**ಸೈವ ಸ್ಯಾದ್ವಸನಾತ್ಮಿಕಾ ತ್ರಿಜಗತಾಂ ಶಸ್ಯಾಽಪಿ ಕೀರ್ತಿಶ್ಚ ಸಾ !**
**ಶ್ರೀಶಸ್ಯೈವ ಹರೇಸ್ಸಮಸ್ತಮಪಿ ಮೇ ಭಾತ್ಯೇವ ಭೋಗ್ಯಾತ್ಮಕಮ್ ||**

ತಾ|| (ನಿನ್ನಲ್ಲಿ ನನಗೆ ಉಂಟಾಗಿರುವ ಪ್ರೇಮಾತಿಶಯವೇ ಈಗ ನಿನಗೆ ಸರ್ವಾಭರಣಾದಿರೂಪವಾಗಿದೆಯೆಂದು ಹೇಳುತ್ತಾರೆ.) ಚಕ್ರಪಾಣಿಯಾಗಿಯೂ ನಮ್ಮ ಮಹೋಪಕಾರಕನಾದ ಸ್ವಾಮಿಯಾಗಿಯೂ, ಇರುವ ಕೃಷ್ಣನಿಗೆ ನನ್ನ ಆತ್ಮವಸ್ತುವೇ ಮಾಲೆಯಾಗಿದೆ. ನನ್ನ (ಭಕ್ತಿರೂಪವಾದ) ಪ್ರೇಮವೇ ಸುವರ್ಣಮಯವಾಗಿ ಅತ್ಯುಜ್ಜ್ವಲವಾದ ಕಿರೀಟಾದ್ಯಾಭರಣರೂಪವಾಗಿಯೂ, ಪೀತಾಂಬರವಾಗಿಯೂ, ದಿವ್ಯಕೀರ್ತಿರೂಪವಾಗಿಯೂ ಇರುವುದು.

(೬) ಕಾಲಶಕ್ಕರತ್ತೊಡು ವೆಣ್ಶಙ್ಗಮ್ ಕೈಯೇನ್ದಿನಾಯ್,
ಞಾಲಮುಱ್ಱುಮುಣ್ಡುಮಿೞ್ನ್ದ ನಾರಾಯಣನೇ ಯೆನ್ಱೆನ್ಱು,
ಓಲಮಿಟ್ಟು ನಾನೞೈತ್ತಾಲೊನ್ಱುಮ್ ವಾರಾಯಾಕಿಲುಮ್,
ಕೋಲಮಾಮೆನ್ ಶೆನ್ನಿಕ್ಕುನ್ ಕಮಲಮನ್ನ ಕುರೈಕೞಲೇ.

ಪ್ರ॥ ಕಾಲಶಕ್ಕರತ್ತೊಡು – ಶತ್ರುಗಳಿಗೆ ಕಾಲರೂಪಿಯಾಗಿ ನಾಶಕವಾದ ಚಕ್ರದೊಡನೆ, ವೆಳ್ಶಙ್ಗು–ಬಿಳೀಶಂಖವನ್ನು, ಅಮ್–ರಮಣೀಯವಾದ, ಕೈ–ಹಸ್ತಗಳಲ್ಲಿ, ಏನ್ದಿನಾಯ್–ಧರಿಸಿದವನೇ, ಞಾಲಮ್ ಮುಱ್ಱುಮ್–ಪ್ರಪಂಚವನ್ನೆಲ್ಲಾ, ಉಣ್ಡು ಉಮಿೞ್ನ್ದ – ಭಕ್ಷಿಸಿ (ತನ್ನ ಉದರದಲ್ಲಿಟ್ಟು ರಕ್ಷಿಸಿ) ಪುನಃ ಸೃಷ್ಟಿಸಿದ, ನಾರಾಯಣನೇ–(ನಿರುಪಾಧಿಕಸಮ್ಬನ್ಧವುಳ್ಳ) ನಾರಾಯಣನೇ, ಎನ್ಱು ಎನ್ಱು–ಎಂಬೀ ಗುಣಗಳನ್ನು ಒಂದೊಂದಾಗಿ ಹೇಳಿ, ಓಲಮಿಟ್ಟು–ಉದ್ಘೋಷಿಸಿ, ನಾನ್–(ನಿನ್ನಲ್ಲಿ ಬರಲು ಅಶಕ್ತನಾದ) ನಾನು, ಅೞೈತ್ತಾಲ್–ಕರೆದರೂ, ಒನ್ಱುಮ್–ಸ್ವಲ್ಪವೂ (ಲೇಶಮಾತ್ರವೂ ನಿನ್ನ ಆಭಿಮುಖ್ಯವನ್ನು ತೋರಿಸದೆ), ವಾರಾಯಾಕಿಲುಮ್–(ನೀನು) ಬರದೆ ಇದ್ದಾಗ್ಯೂ, ಎನ್ ಶೆನ್ನಿಕ್ಕು–ನನ್ನ ತಲೆಗೆ, ಉನ್–ನಿನ್ನ, ಕಮಲಮ್ ಅನ್ನ–ಕಮಲದಂತೆ ಅತ್ಯನ್ತಭೋಗ್ಯವಾದ, ಕುರೈ–ಧ್ವನಿಸುವ (ವೀರರ) ಗೊಲುಸುಗಳುಳ್ಳ, ಕೞಲ್ – ಪಾದಗಳು, ಕೋಲಮ್ ಆಮ್–ಅಲಂಕಾರವಾಗಿ ತೇಜಸ್ಕರವಾಗುವುವು.

( ಸ–ಗಾ–ರ ॥ )—

ಕಾಲಾಧೀಶ್ವರಚಕ್ರಶಂಖವಿಲಸತ್ಪಾಣೇ! ಜಗದ್ಭಕ್ಷಕ !
ತ್ವಂ ನಾರಾಯಣ ಏವ ಸರ್ವಜಗತಾಂ ಸ್ರಷ್ಟಾಽಪ್ಯಹೋ! ರಕ್ಷಕಃ।
ಇತ್ಯೇವಂ ಬಹುಧಾಽಪಿ ಘೋಷಣರವೈರಾಹೂಯ ಚ ತ್ವಾಮಹಂ
ಭಗ್ನಾಶೋಽಸ್ಮಿ ತಥಾಽಪಿ ತೇ ಪದಯುಗಂ ಮನ್ಮೂರ್ಧ್ನಿ ಭೂಷಾಯತೇ॥

ತಾ॥ (ಅವನು ತಮ್ಮಲ್ಲಿ ಪ್ರಣಯಿಯಾಗಿದ್ದುದನ್ನು ಹೇಳಿ ಈಗ ಅವನಲ್ಲಿ ತಮಗೆ ಉಂಟಾದ ಪ್ರಣಯವನ್ನು ವರ್ಣಿಸುತ್ತಾರೆ.) ಶಂಖಚಕ್ರಧಾರಿಯೇ! ಜಗತ್ಸೃಷ್ಟಿಸ್ಥಿತಿಲಯಕರ್ತನಾದ ನಾರಾಯಣನೇ–! ಎಂದು ಒಂದೊಂದಾಗಿ ನಿನ್ನ ಗುಣಗಳನ್ನು ನಾನು ಹೇಳಿ ಉದ್ಘೋಷಿಸಿ ಕರೆದಾಗ್ಯೂ ನೀನು ಲೇಶಮಾತ್ರವೂ ಆಭಿಮುಖ್ಯವನ್ನು ತೋರಿಸದೆ ಇರುತ್ತೀಯೆ. ಹೀಗೆ ಇದ್ದಾಗ್ಯೂ ನಿನ್ನಲ್ಲಿ ನನಗೆ ಇರುವ ಪ್ರೇಮಾತಿಶಯವು ನಿನ್ನ ಪಾದಾರವಿನ್ದಗಳನ್ನೇ ನನ್ನ ಶಿರಸ್ಸಿಗೆ ಅಲಂಕಾರವಾಗಿ ಪ್ರಕಾಶಿಸುವಂತೆ ಮಾಡುತ್ತಿದೆ—(ಎಂದು ಭಾವವು).

(೭) ಕುರೈಕ್ಕಳಲ್ಗಳ್ ನೀಟ್ಟಿ ಮಣ್ಕೊಣ್ಡ ಕೋಲವಾಮನಾ
ಕುರೈಕ್ಕಳಲ್ ಕೈಕೂಪ್ಪುವಾರ್ಗಳ್ ಕೂಡ ನಿನ್ಱ ಮಾಯನೇ,
ವಿರೈಕೊಳ್ಪೂವುಮ್ ನೀರುಮ್ ಕೊಣ್ಡೇತ್ತ
ಮಾಟ್ಟೇನೇಲುಮ್ ಉನ್,
ಉರೈಕೊಳ್ ಶೋದಿ ತ್ತಿರುವುರುವಮೆನ್ನದಾವಿಮೇಲದೇ.

ಪ್ರ|| ಕುರೈ – ವೀರಗೊಲುಸು ಧರಿಸಿರುವ, ಕ್ಕಳಲ್‌ಕಳ್–ಪಾದಗಳನ್ನು, ನೀಟ್ಟಿ–ನೀಡಿ, ಮಣ್–ಲೋಕವನ್ನೆಲ್ಲಾ, ಕೊಣ್ಡ–ಅಳೆದುಕೊಂಡ, ಕೋಲಮ್–ದಿವ್ಯಸೌನ್ದರ್ಯವುಳ್ಳ, ವಾಮನಾ–ವಾಮನನನೇ, ಕುರೈಕ್ಕಳಲ್–ಆ (ವೀರಗೊಲುಸುಳ್ಳ) ಪಾದಗಳನ್ನು ಕುರಿತು, ಕೈಕೂಪ್ಪುವಾರ್‌ಕಳ್ – ಅಂಜಲಿಮಾಡುವವರು, ಕೂಡ–ತನ್ನನ್ನೇ ಸೇರುವಂತೆ, ನಿನ್ಱ–(ಉಪಾಯವಾಗಿಯೂ ಉಪೇಯವಾಗಿಯೂ) ನಿಂತ, ಮಾಯನೇ–ಆಶ್ಚರ್ಯಭೂತನೇ, ವಿರೈಕೊಳ್ – ಪರಿಮಳಭರಿತವಾದ, ಪೂವುಮ್–ಪುಷ್ಪವನ್ನೂ, ನೀರುಮ್ – ತೀರ್ಥವನ್ನೂ, ಕೊಣ್ಡು–ತಂದು, ಏತ್ತಮಾಟ್ಟೇನೇಲುಮ್–ಸ್ತೋತ್ರಮಾಡಲು ನಾನು ಶಕ್ತನಲ್ಲದೆ ಇದ್ದರೂ, ಉರೈ–ವೇದಾನ್ತವಚನಗಳಿಂದ, ಕೊಳ್–ಅಪರಿಚ್ಛೇದ್ಯವಾದ, ಶೋದಿ–ತೇಜೋಮಯವಾದ, ಉನ್–ನಿನ್ನ, ತಿರು ಉರುವಮ್ – ದಿವ್ಯಮಂಗಳವಿಗ್ರಹವು (ದಿವ್ಯಶರೀರವು), ಎನ್ನದು ಆವಿ ಮೇಲದು - ನನ್ನ ಆತ್ಮಾವಿನಮೇಲೆಯೇ ಆಸಕ್ತವಾಗಿದೆ. (ನನ್ನ ಆತ್ಮನನ್ನೇ ವಿಷಯೀಕರಿಸಿದೆ).

( ಸ–ಗಾ–ರ || )—

ವ್ಯಾಪ್ತಂ ಭೂಮಿತಲಂ ಸಮಸ್ತಮಪಿ ಯತ್ಪಾದಾಬ್ಜತೋ ವಾಮನ !
ತ್ವಂ ಜಾತೋಽತ್ರ ತವಾಂಘ್ರಿಪಂಕಜರತಾಸ್ತ್ವಾಂ ಮಾಯಿನಂ ಸಂಶ್ರಿತಾಃ|
ನಾಹಂ ತ್ವಾಂ ಹರಿ ಮರ್ಚಯನ್ ಕುಸುಮತೋ ಧನ್ಯೋಽಸ್ಮಿ ಪಾದ್ಯಾದಿಭಿ-
ರ್ದಿವ್ಯಂ ತೇಽಸ್ತಿ ತಥಾಽಪಿ ಚಾತ್ಮನಿ ಹಿ ಮೇ ವೇದಾನ್ತಗೂಢಂ ವಪುಃ ||

ತಾ|| (ನಾನು ಅಕಿಂಚನನಾದರೂ ನಿನಗೆ ನನ್ನ ಆತ್ಮವಸ್ತುವೇ ಧಾರಕವಾಗಿದೆಯೆಂದು ಹೇಳುತ್ತಾರೆ.) ಲೋಕವನ್ನೆಲ್ಲಾ ನಿನ್ನ ಪಾದಗಳಿಂದ ಅಳೆದುಕೊಂಡ ದಿವ್ಯಸೌನ್ದರ್ಯವುಳ್ಳ ವಾಮನನೇ ! ಆಶ್ರಿತರಿಗೆ ಪ್ರಾಪ್ಯಪ್ರಾಪಕಭೂತನಾಗಿ ನಿಂತ ಮಾಯಾಚೇಷ್ಟಿತನೇ ! ಪುಷ್ಪತೀರ್ಥಾದಿಗಳನ್ನು ಸಮರ್ಪಿಸಿ ನಿನ್ನನ್ನು ಸ್ತೋತ್ರಮಾಡಲು ನಾನು ಶಕ್ತನಲ್ಲದೆ ಇದ್ದರೂ, ವೇದಾಂತವಾಕ್ಯಗಳಿಂದಲೂ

ಅಪರಿಚ್ಛೇದ್ಯವಾದ ದಿವ್ಯತೇಜೋಮಯವಾದ ನಿನ್ನ ದಿವ್ಯಮಂಗಳವಿಗ್ರಹವು ನನ್ನಲ್ಲಿಯೇ ಆಸಕ್ತವಾಗಿ ನನ್ನನ್ನೇ ವಿಷಯೀಕರಿಸಿದೆ.

(೮) ಎನ್ನದಾವಿಮೇಲ್ಲೈಯಾಯ್ ಏರ್‌ಕೊಳ್ ಏೞುಲಕಮುಮ್
ತುನ್ನಿ ಮುೞುಮಾಕಿ ನಿನ್ಱಶೋದಿಞಾನಮೂರ್ತ್ತಿಯಾಯ್,
ಉನ್ನದೆನ್ನದಾವಿಯುಮೆನ್ನದುನ್ನದಾವಿಯುಮ್,
ಇನ್ನವಣ್ಣಮೇ ನಿನ್ಱಾಯೆನ್ಱುರೈಕ್ಕವಲ್ಲೇನೇ.

ಪ್ರ|| ಎನ್ನದು ಆವಿಮೇಲ್ಲೈಯಾಯ್ – ನನ್ನ ಆತ್ಮವಸ್ತುವಿನಮೇಲೆ ಆಸಕ್ತವಾಗಿ, ಏರ್‌ಕೊಳ್–ಔಜ್ಜ್ವಲ್ಯವುಳ್ಳ, ಏೞುಲಕಮುಮ್–ಸಪ್ತ (ಸಕಲ) ಲೋಕಗಳಲ್ಲೂ, ತುನ್ನಿ–ಪೂರ್ಣವಾಗಿ ವ್ಯಾಪಿಸಿ, ಮುೞುಮ್–ಸಮಸ್ತಪದಾರ್ಥಗಳೂ, ಆಕಿ-ತಾನೇ ಆಗಿ (ತನಗೇ ಸೇರಿರುವಂತೆ), ನಿನ್ಱ–ನಿಂತ, ಶೋದಿ–ಸ್ವಯಂಜ್ಯೋತೀರೂಪವಾದ, ಞಾನಮ್ – ಜ್ಞಾನವನ್ನು, ಮೂರ್ತ್ತಿಯಾಯ್ – ಸ್ವರೂಪವಾಗಿ ಉಳ್ಳವನೇ, ಎನ್ನದು ಆವಿ – ನನ್ನ ಆತ್ಮಸ್ವರೂಪವು, ಉನ್ನದುಮ್ – ನಿನ್ನದೂ (ನಿನಗೆ ಭೋಗ್ಯವಾಗಿಯೂ), ಉನ್ನದು ಆವಿ – ನಿನ್ನ ದಿವ್ಯಾತ್ಮಸ್ವರೂಪವು, ಎನ್ನದುಮ್ – ನನ್ನದೂ ( ನನಗೆ ಭೋಗ್ಯವಾಗಿಯೂ ), ಇನ್ನವಣ್ಣಮೇ – ಈ ಪ್ರಕಾರವೇ, ನಿನ್ಱಾಯ್–ನಿಂತವನೇ, ಎನ್ಱು– ಎಂದು, ಉರೈಕ್ಕವಲ್ಲೇನೇ–ಹೇಳಬಲ್ಲೆನೋ ? (ಇದನ್ನೆಲ್ಲಾ ಹೇಗೆ ವರ್ಣಿಸಬಲ್ಲೆನು ? )

( ಸ–ಗಾ–ರ || )—

ಪ್ರೀತ್ಯಾ ಚಾತ್ಮನಿ ಮೇ ತ್ವಮುಜ್ಜ್ವಲತನುಜ್ಞಾನಾತ್ಮಕಸ್ಸರ್ವತೋ
ಲೋಕಾನ್ ಸಪ್ತ ಚ ಸಂಪ್ರವಿಶ್ಯ ಸಕಲಂ ಭೂತ್ವಾ ಸ್ವಯಂ ಭ್ರಾಜಸೇ|
ಆತ್ಮಾ ಮೇ ತವ ವಶ್ಯ ಏವ ಚ ತವಾಪ್ಯಾತ್ಮಾ ವಶೋ ಮೇ ಹರೇ !
ದೃಷ್ಟ್ವೈವ ಚಾಖಿಲಮಿತ್ಥಮಿತ್ಯಪಿ ಚ ತದ್ವಕ್ತುಂ ನ ಶಕ್ಯಂ ಹಿ ಮೇ ||

ತಾ|| (ಒಬ್ಬರನ್ನು ಬಿಟ್ಟು ಒಬ್ಬರು ಇರಲಾರದಂತೆ ನಮ್ಮಿಬ್ಬರಿಗೂ ಉಂಟಾಗಿರುವ ಪ್ರೇಮಬನ್ಧವು ವಾಚಾ ವರ್ಣಿಸಲು ಶಕ್ಯವಲ್ಲವೆಂದು ಹೇಳುತ್ತಾರೆ.) ನನ್ನ ಆತ್ಮವಸ್ತುವನ್ನೇ ಆಶ್ರಯಿಸಿ ಅತ್ಯುಜ್ಜ್ವಲವಾದ ಸರ್ವವ್ಯಾಪಿ-ದಿವ್ಯಜ್ಞಾನಮಯ ತೇಜೋಮೂರ್ತಿಯುಳ್ಳವನೇ ! ನನ್ನ ಆತ್ಮಸ್ವರೂಪವು ನಿನಗೆ ಭೋಗ್ಯವಾಗಿಯೂ

ನಿನ್ನ ದಿವ್ಯಾತ್ಮಸ್ವರೂಪವು ನನಗೆ ಭೋಗ್ಯವಾಗಿಯೂ ಇರುವುದರಿಂದ, ಈ ಪ್ರಕಾರ ವನ್ನು ನಾನು ಯಾವ ಉಕ್ತಿಗಳಿಂದ ವರ್ಣಿಸಬಲ್ಲೆನು? (ಇದು ವರ್ಣಿಸಲು ಅಸಾಧ್ಯವೆಂದು ಭಾವವು.)

(೯) ಉರೈಕ್ಕವಲ್ಲೇನಲ್ಲೇನ್ ಉನ್ನುಲಪ್ಪಿಲ್ ಕೀರ್ತ್ತಿವೆಳ್ಳತ್ತಿನ್,
ಕರೈಕ್ಕಣ್ ಶೆಲ್ವನ್ ನಾನ್ ಕಾದನ್ಮೈಯಲೇಱಿನೇನ್,
ಪುರೈಪ್ಪಿಲಾದ ಪರಮ್ಪರನೇ ಪೊಯ್ಯಿಲಾದ ಪರಂಶುಡರೇ,
ಇರೈತ್ತು ನಲ್ಲ ಮೇನ್ಮಕ್ಕಳೇತ್ತ ಯಾನುಮೇತ್ತಿನೇನ್.

ಪ್ರ॥ ಉರೈಕ್ಕವಲ್ಲೇನಲ್ಲೇನ್-(ನಿನ್ನ ಆಶ್ರಿತವಾತ್ಸಲ್ಯವನ್ನು) ನಾನು ವರ್ಣಿಸಲು ಶಕ್ತನಲ್ಲ. (ಏತಕ್ಕೆಂದರೆ-) ಉಲಪ್ಪು-ಇಲ್-ಅನ್ತವಿಲ್ಲದ, ಉನ್-ನಿನ್ನ, ಕೀರ್ತಿ-ವಾತ್ಸಲ್ಯದ ಪ್ರಖ್ಯಾತಿಯೆಂಬ, ವೆಳ್ಳತ್ತಿನ್-ಸಮುದ್ರದ, ಕರೈಕ್ಕಣ್-ತೀರದಲ್ಲಿ, ನಾನ್-ನಾನು, ಎನ್ರು-ಎಂದಿಗೆ, ಶೆಲ್ವನ್-ಸೇರುವೆನು? ಕಾದಲ್-(ನನ್ನ) ಪ್ರೇಮದಿಂದ, ಮೈಯಲೇಱಿನೇನ್ - ಅತ್ಯನ್ತ ಕ್ಷೋಭವನ್ನು ಹೊಂದಿದೆನು. ಪುರೈಪ್ಪು ಇಲಾದ-ದೋಷಲೇಶವೂ ಇಲ್ಲದ, ಪರಮ್ಪರನೇ - ಸರ್ವಸ್ಮಾತ್ಪರನೇ, ಪೊಯ್ ಇಲಾದ-ಸತ್ಯಸ್ವರೂಪನಾದ, ಪರಂಶುಡರೇ-ನಿರತಿಶಯೌಜ್ಜ್ವಲ್ಯವುಳ್ಳವನೇ, ನಲ್ಲ-ವಿಲಕ್ಷಣಜ್ಞಾನಾದಿಶೀಲರಾದ, ಮೇಲ್-ಸರ್ವೋತ್ಕೃಷ್ಟರಾದ, ಮಕ್ಕಳ್-ನಿತ್ಯಸೂರಿಗಳು, ಇರೈತ್ತು-ಮಹಾಘೋಷದೊಡನೆ, ಏತ್ತ-ಸ್ತೋತ್ರಮಾಡುತ್ತಿರುವಂತೆ, ಏತ್ತಿನೇನ್-ನಾನೂ ಸ್ತೋತ್ರಮಾಡಿದೆನು.

( ಸ-ಗಾ-ರ ॥ )—

**ವಕ್ತುಂ ನೈವ ಹಿ ಶಕ್ತಿರಸ್ತಿ ಮಮ ತೇ ಕೀರ್ತ್ಯಬ್ಧಿಪಾರಂ ಕದಾ**
**ಯಾಮಿ ಶ್ರೀಧರ! ಭಕ್ತಿವಶ್ಯಹೃದಯೋ ಮುಗ್ಧೋಽಸ್ಮಿ ತೇಜೋನಿಧೇ! ।**
**ಸರ್ವಸ್ಮಾತ್ಪರ! ದಿವ್ಯಲಕ್ಷಣಗುಣ! ಶ್ರೀಸೂರಿಸಂಸ್ತುತ್ಯ! ಭೋ**
**ದೇವ! ಶ್ರೀಪುರುಷೋತ್ತಮಾದ್ಯ ಕರವೈ ಸ್ತೋತ್ರಂ ತವಾಜ್ಞೋಽಪ್ಯಹಮ್॥**

ತಾ॥ (ನಿನ್ನ ಪ್ರಣಯಾತಿಶಯವನ್ನು ನಾನು ವರ್ಣಿಸಲಾರೆನೆಂದು ಹೇಳುತ್ತಾರೆ.) ನಿನ್ನ ಆಶ್ರಿತವಾತ್ಸಲ್ಯವನ್ನು ನಾನು ವರ್ಣಿಸಲಾರೆನು. ಅಪಾರವಾದ ನಿನ್ನ ಕೀರ್ತಿಸಮುದ್ರದ ತೀರವನ್ನು ನಾನು ಎಂದಿಗೆ ಸೇರುವೆನು? ನನ್ನ ಪ್ರೇಮದಿಂದ ನಾನು ಮನಃಕ್ಷೋಭವನ್ನು ಹೊಂದಿದೆನು. ನಿರ್ದೋಷನಾದ ಸರ್ವಸ್ಮಾತ್ಪರನೇ! ಸತ್ಯಸ್ವರೂಪಿಯಾದ ಪರಜ್ಯೋತಿರ್ಮಯನೇ! ದಿವ್ಯಜ್ಞಾನಾದಿ ಸಮ್ಪ

ನ್ನರಾದ ನಿತ್ಯಸೂರಿಗಳಿಂದ ಸ್ತೋತ್ರಮಾಡಲ್ಪಡುವ ನಿನ್ನನ್ನು ಅಜ್ಞನಾದ ನಾನೂ ಕೂಡ ಸ್ತೋತ್ರಮಾಡಲಾರಂಭಿಸಿದೆನು. (ಇದು ನನ್ನ ಮೌಢ್ಯದ ಕಾರ್ಯವು— ಎಂದು ಭಾವವು.)

(೧೦) ಯಾನುಮೇತ್ತಿ ಯೇೞುಲಕುಮ್ ಮುಱ್ಱುಮೇತ್ತಿ,
ಪ್ಪಿನ್ನೈಯುಮ್
ತಾನುಮೇತ್ತಿಲುಮ್ ತನ್ನೈಯೇತ್ತ ವೇತ್ತ ವೆಙ್ಗೆಯ್‌ದುಮ್,
ತೇನುಮ್ ಪಾಲುಮ್ ಕನ್ನಲುಮಮುದುಮಾಕಿ ತ್ತಿತ್ತಿಪ್ಪ,
ಯಾನುಮೆಮ್ಬಿರಾನೈಯೇ ಯೇತ್ತಿನೇನ್ ಯಾನುಯ್‌ವಾನೇ.

ಪ್ರ॥ ಯಾನುಮ್—ನಾನೂ, ಏತ್ತಿ—ಸ್ತುತಿಸಿ, ಮುಱ್ಱುಮ್—ಅಜ್ಞ ಸರ್ವಜ್ಞ ವಿಭಾಗವಿಲ್ಲದಂತೆ, ಏೞುಲಕುಮ್—ಈ (ಸಪ್ತ) ಸರ್ವಲೋಕಗಳೂ, ಏತ್ತಿ—ಸ್ತುತಿಸಿ, ಪಿನ್ನೈಯುಮ್—ಅದರಮೇಲೂ, ತಾನುಮ್—(ಸರ್ವಜ್ಞನಾದ) ಆ ಸರ್ವೇಶ್ವರನೇ, ಏತ್ತಿಲುಮ್ — ಸ್ತೋತ್ರಮಾಡಿದರೂ, ತನ್ನೈ — (ಅಪರಿಚ್ಛಿನ್ನ ಸ್ವಭಾವನಾದ) ತನ್ನನ್ನು, ಏತ್ತ ಏತ್ತ—ಮೇಲೆಮೇಲೆ ಸ್ತೋತ್ರಮಾಡುತ್ತ ಹೋದರೆ, ಎಙ್ಗು—ಎಲ್ಲಿ, ಎಯ್‌ದುಮ್—ಮುಗಿಯುವುದು? ತೇನುಮ್—ಜೇನುತುಪ್ಪವೂ, ಪಾಲುಮ್—ಹಾಲೂ, ಕನ್ನಲುಮ್—ಸಕ್ಕರೆಯೂ, ಅಮುದುಮ್—ಅನ್ನವೂ, ಆಕಿ—ಆಗಿ, ತ್ತಿತ್ತಿಪ್ಪ—(ಅವುಗಳಂತೆ) ರುಚಿಯಾಗಿ, ಎಮ್—ನನಗೆ ಅನುಭವವನ್ನುಂಟುಮಾಡಿದ, ಪಿರಾನೈಯೇ—ಮಹೋಪಕಾರಕನನ್ನೇ, ಯಾನ್ — ನಾನು, ಉಯ್ವಾನ್ — ಉಜ್ಜೀವಿಸುವುದಕ್ಕೆ, ಯಾನುಮ್—ನಾನೂ, ಏತ್ತಿನೇನ್—ಸ್ತುತಿಸಿದೆನು.

( ಸ—ಗಾ—ರೆ ॥ )—
**ಸ್ತೋತುಂ ಚೇತ್ಪ್ರವಣೋಽಸ್ಮ್ಯಹಂ ಚ ಸಕಲಾ ಲೋಕಾಶ್ಚ ಸ್ವಯಂ ಶ್ರೀಧರ**
**ಸ್ಸಾಕ್ಷಾದಚ್ಯುತ ಏವ ಚ ಸ್ತುತಿರಿಯಂ ಕಿಂ ವಾಽಸ್ತಿ ಶಕ್ಯಾ ಕ್ವಚಿತ್ ? ।**
**ದಿವ್ಯಂ ತನ್ಮಧು ದುಗ್ಧಮೇವ ಮಧುರಂ ಕಿಂ ಶರ್ಕರಾಖಣ್ಡ ಏ—**
**ವಾಹೋಸ್ವಿತ್ತ್ವಮೃತಂ ಕಿಮಿತ್ಯಹಮಪಿ ಸ್ತೌಮ್ಯೇನಮುಜ್ಜೀವಿತುಮ್ ॥**

ತಾ॥ (ಅಪರಿಚ್ಛಿನ್ನಮಹಿಮನಾದ ಸರ್ವೇಶ್ವರನನ್ನು ಯಾರೂ ವರ್ಣಿಸಲಾರರು. ಅವನೂ ತನ್ನನ್ನು ಸಮಗ್ರವಾಗಿ ಸ್ತೋತ್ರಮಾಡಲಾರನು. ಇಂತಹ ಭಗವನ್ತನನ್ನು ನಾನು ನನ್ನ ಉಜ್ಜೀವನಕ್ಕಾಗಿ ಸ್ವಲ್ಪಮಟ್ಟಿಗೆ ಸ್ತುತಿಸಿದೆನೆಂದು ಹೇಳುತ್ತಾರೆ.) ಸರ್ವಲೋಕಗಳೂ ಅವನನ್ನು ಸ್ತೋತ್ರಮಾಡಿದಾಗ್ಯೂ, ಅವನೇ ತನ್ನನ್ನು ಸ್ತೋತ್ರಮಾಡಿದಾಗ್ಯೂ, ಅವನು ಅಪರಿಚ್ಛಿನ್ನಮಹಿಮನಾದುದರಿಂದ

ಮೇಲೆಮೇಲೆ ಮಹಿಮೆಯು ಅಪಾರವಾಗಿ ಇದ್ದೇ ಇರುವುದು. ಆದುದರಿಂದ ವರ್ಣಿಸಲಶಕ್ಯವಾಗಿಯೇ ಇರುವುದು. ಸರ್ವವಿಧ ಭೋಗ್ಯವಸ್ತುವೂ ನನಗೆ ಅವನೇ ಆಗಿರುವುದರಿಂದ (ಜೇನು-ಹಾಲು-ಸಕ್ಕರೆ-ಅನ್ನ-ಇವುಗಳಂತೆ ರುಚಿಜನಕನಾದ) ನನ್ನ ಸ್ವಾಮಿಯನ್ನು ನನ್ನ ಉಜ್ಜೀವನಕ್ಕಾಗಿ' ಸ್ವಲ್ಪಮಟ್ಟಿಗೆ ಸ್ತುತಿಸಿದೆನು

(೧೧) ಉಯ್‍ವುಪಾಯಮ್ ಮಱ್ಱಿನ್ಮೈ ತೇಱಿ ಕ್ಕಣ್ಣನೊಣ್
ಕೞಲ್‍ಕಳ್ಮೇಲ್,
ಶೆಯ್ಯ ತಾಮರೈ ಪ್ಪೞನ ತ್ತೆನ್ ಕುರುಕೂರ್ ಚ್ಚಡಕೋಪನ್,
ಪೊಯ್ಯಿಲ್ ಪಾಡಲಾಯಿರತ್ತುಳಿವೈಯುಮ್ ಪತ್ತುಮ್
ವಲ್ಲಾರ್‍ಕಳ್,
ವೈಯಮ್ ಮನ್ನಿ ವೀಱ್ಱಿರುನ್ದು ವಿಣ್ಣುಮಾಳ್ವರ್
ಮಣ್ಣೂಡೇ.

ಪ್ರ|| ಉಯ್‍ವು ಉಪಾಯಮ್-ಉಜ್ಜೀವಿಸುವ ಉಪಾಯವು, ಮಱ್ಱು ಇನ್ಮೈ-ಬೇರೆ ಇಲ್ಲದೆ ಇರೋಣವನ್ನು, ತೇಱಿ-ಚೆನ್ನಾಗಿ ಪರಿಶೀಲಿಸಿ (ನಿರೂಪಿಸಿ), ಕಣ್ಣನ್-(ಆಶ್ರಿತವತ್ಸಲನಾದ) ಶ್ರೀಕೃಷ್ಣನ, ಒಳ್ - ಭೋಗ್ಯತಮವಾದ, ಕೞಲ್‍ಕಳ್ ಮೇಲ್-ಪಾದಗಳಮೇಲೆ, ಶೆಯ್ಯತಾಮರೈ-ಕೆಂದಾವರೆ ಹೂವುಗಳುಳ್ಳ, ಪೞನಮ್,-ಕ್ಷೇತ್ರತೀರ್ಥಗಳಿಂದ ಕೂಡಿದ, ತೆನ್-ದಕ್ಷಿಣದಿಕ್ಕಿನಲ್ಲಿರುವ ನಲ್-ಶ್ಲಾಘ್ಯವಾದ, ಕುರುಕೂರ್-ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್-ನಮ್ಮಾೞ್ವಾರು (ರಚಿಸಿ ಇರುವ), ಪೊಯ್ ಇಲ್-ಮಿಥ್ಯಾವಚನರಹಿತವಾದ (ಸತ್ಯವಚನ ಭರಿತವಾದ), ಪಾಡಲ್ - ಕೀರ್ತನರೂಪವಾದ, ಆಯಿರತ್ತುಳ್ - ಸಹಸ್ರಪದ್ಯಮಾಲೆಯೊಳು, ಇವೈಪತ್ತುಮ್-ಈ ಹತ್ತು ಪದ್ಯಗಳನ್ನೂ, ವಲ್ಲಾರ್‍ಕಳ್-(ಅಭ್ಯಸಿಸ) ಬಲ್ಲವರು, ವೈಯಮ್-ಭೂಲೋಕದಲ್ಲಿ, ಮನ್ನಿ - ಬಹುಕಾಲ ಸ್ಥಿರವಾಗಿ ಸೌಖ್ಯದೊಡನೆ ಇದ್ದು, ವೀಱ್ಱಿರುನ್ದು-ಸುಪ್ರಸಿದ್ಧರಾಗಿ ಬಾಳಿ, ಮಣ್ಣೋಡೇ-ಈ ಭೂಮಿಯೊಡನೆ, ವಿಣ್ಣುಮ್-ಪರಮಪದವನ್ನೂ, ಆಳ್ವರ್-ಆಳುವರು. (ಉಭಯ ವಿಭೂತಿ ಸಾಮ್ರಾಜ್ಯವನ್ನೂ ಪಡೆಯುವರು)

( ಸ-ಗಾ-ರ || )—

ನಾನ್ಯತ್ಸಾಧನಮಸ್ತಿ ಸರ್ವಜಗತಾಮುಜ್ಜೀವನಾಯೇತ್ಯಸೌ
ಶ್ರೀಕೃಷ್ಣಸ್ಯ ಪದಾಬ್ಜಯುಗ್ಮನುತಯೇ ಗಾಥಾಸಹಸ್ರಂ ಮುನಿಃ |
ದಿವ್ಯಶ್ರೀಕುರುಕೇಶ್ವರಶ್ಶಠರಿಪುಃ ಪ್ರಾಹ ಸ್ವಯಂ ಯೇ ಪುನ-
ಸ್ತತ್ರೇದಂ ದಶಕಂ ಪಠನ್ತಿ ಭುವಿ ತೇ ಭೂಮೇರ್ದಿವಶ್ಚೇಶ್ವರಾಃ ||

ತಾ|| (ಈ ದಶಕವನ್ನು ಪಠನಮಾಡಬಲ್ಲವರು ಉಭಯವಿಭೂತಿ ಸಾಮ್ರಾಜ್ಯವನ್ನು ಪಡೆಯುವರೆಂದು ಫಲವನ್ನು ಸೂಚಿಸುತ್ತಾರೆ.) ಉಜ್ಜೀವನೋಪಾಯವನ್ನು ಚೆನ್ನಾಗಿ ನಿರೂಪಿಸಿ ಶ್ರೀಕೃಷ್ಣನ ಚರಣಾರವಿನ್ದಸ್ತುತಿಯಂ ಮಾಡುವುದಕ್ಕಾಗಿ ಶ್ರೀ ಶಠಾರಿಮುನಿವರ್ಯರಿಂದ ರಚಿತವಾದ ಸತ್ಯವಾಕ್ಯಭರಿತವಾದ ಸಹಸ್ರ ಪದ್ಯಮಾಲೆಯೊಳು ಈ ದಶಕವನ್ನು ಬಲ್ಲವರು ಈ ಲೋಕದಲ್ಲಿ ಚಿರಕಾಲ ಚೆನ್ನಾಗಿ ಬಾಳಿ ಸುಪ್ರಖ್ಯಾತರಾಗಿ ಉಭಯವಿಭೂತಿ ಸಾಮ್ರಾಜ್ಯವನ್ನೂ ಪಡೆಯುವರು.

( ದ್ರ-ಉ-ಸಂ || )—

ಪ್ರೀತಃ ಪರಂ ಹರಿರಮುಷ್ಯ ತಥಾ ಸ್ವಭಾವಾ-
ದೇತನ್ಮನೋವಚನದೇಹಕೃತಕ್ರಿಯಾಭಿಃ |
ಸ್ರಕ್ಚನ್ದನಪ್ರಮುಖಸರ್ವವಿಧಸ್ವಭೋಗೈ-
ಸ್ಸಂಶ್ಲಿಷ್ಟವಾನಿದಮುವಾಚ ಮುನಿಸ್ತೃತೀಯೇ ||

( ದ್ರ-ಉ--ತಾ-ರ || )—

ಚೇತೋಗನ್ಧಾನುಲೇಪಸ್ಸ್ತುತಿವಚನಕೃತಸ್ರಕ್ಸ್ರಟೋಞ್ಜಲ್ಯುಪಾತ್ತಾ-
ಽಲಙ್ಕಾರಃ ಪ್ರಾಣವಾಸೀ ಕಲಿತವರಶಿರೋಭೂಷಣಶ್ಚೇತನೇನ |
ಶೀರ್ಷ್ಣಾ ಸತ್ಪಾದಪೀಠಸ್ಸ್ವತನುಸದನತಾಮಾತ್ಮರೂಪೇ ವಿತನ್ವ-
ನ್ನನ್ಯೋನ್ಯಾತ್ಮತ್ವಯೋಗಾತ್ ಪ್ರಭುರಗಣಿ ಮಿಥಶ್ಶ್ಲಿಷ್ಟಭಾವೋಽಥ ತೇನ||

(ಈ ತೃತೀಯದಶಕದ ಸಾರಾಂಶ)—

ಈ ಮೂರನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಸರ್ವದೇಶ-ಸರ್ವಕಾಲ-ಸರ್ವಾವಸ್ಥೆಗಳಲ್ಲೂ ಉಂಟಾಗಬಹುದಾದ ಭಗವದನುಭವಗಳನ್ನೆಲ್ಲಾ ಈಗಲೇ ಇಲ್ಲಿಯೇ ಹೊಂದಬೇಕೆಂದು ಅತ್ಯುತ್ಕಟವಾದ ಆಶೆಯುಳ್ಳವರಾದುದರಿಂದ, ಶ್ರೀ ಭಗವನ್ತನು ಇವರಲ್ಲಿಯೇ ತನ್ನ ಪ್ರೀತ್ಯತಿಶಯವನ್ನು ತೋರಿಸಲು, ಇವರೂ ಕೂಡ ಈ ಪ್ರಣಯಾತಿಶಯವನ್ನು ಅನುಸನ್ಧಾನಮಾಡಿ ವರ್ಣಿಸಿ ಸನ್ತುಷ್ಟರಾಗಿ ಇದಾರೆ.

---

ಶ್ರೀಃ

# ಚತುರ್ಥಶತಕದಲ್ಲಿ—ಚತುರ್ಥದಶಕ.

## (ಮಣ್ಣೈಯಿರುನ್ದು ತುೞಾವಿ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿಯು ನಾಯಿಕಾವಸ್ಥೆಯಂ ಪಡೆದು ಮೋಹಾವಿಷ್ಟತೆಯಿಂದ ಸದೃಶವಸ್ತುಗಳನ್ನು ನೋಡಿ ಕ್ರನ್ದನ ಮಾಡುತ್ತಿರುವುದನ್ನು ಜನನಿಯು ವರ್ಣಿಸುತ್ತಾಳೆ.)

---

(೧) ಮಣ್ಣೈಯಿರುನ್ದು ತುೞಾವಿ ವಾಮನನ್ ಮಣ್ಣಿದು
ವೆನ್ನುಮ್,
ವಿಣ್ಣೈ ತ್ತೊೞುದವನ್ ಮೇವು ವೈಕುನ್ದವೆನ್ರು
ಕೈಕಾಟ್ಟುಮ್,
ಕಣ್ಣೈ ಯುಳ್ನೀರ್ ಮಲ್ಗ ನಿನ್ರು ಕಡಲ್ವಣ್ಣನೆನ್ನು
ಮನ್ನೇ, ಎನ್
ಪೆಣ್ಣೈ ಪ್ಪೆರುಮಯಲ್ ಶೆಯ್‌ದಾರ್‌ಕ್ಕೆನ್ ಶೆಯ್‌ಗೇನ್
ಪೆಯ್‌ವಳೈಯೀರೇ.

ಪ್ರ|| ಮಣ್ಣೈ-ಭೂಮಿಯನ್ನು, ಇರುನ್ದು – ಕುಳಿತುಕೊಂಡು, ತುೞಾವಿ-ಕೈಯಿಂದ ಬಗೆದು, ಇದು – ಇದು, ವಾಮನನ್ – ಅವನು ವಾಮನನಾಗಿ ಅಳೆದು ಕೊಂಡ, ಮಣ್-ಭೂಮಿಯು, ಎನ್ನುಮ್—ಎಂದು ಹೇಳುತ್ತಿದಾಳೆ. ವಿಣ್ಣೈ-ಆಕಾಶವನ್ನು, ತೊೞುದು-(ನೋಡಿ) ಅಂಜಲಿಮಾಡಿ, ಅವನ್-ಅವನು, ಮೇವು-ನಿತ್ಯವಾಸಮಾಡುವ, ವೈಕುನ್ದಮ್-ವೈಕುಣ್ಠವು (ಪರಮಪದವು), ಎನ್ರು-ಎಂದು ಹೇಳಿ, ಕೈಕಾಟ್ಟುಮ್-ಕೈಯಿಂದ ತೋರಿಸುತ್ತಿದಾಳೆ. ಉಳ್-ಒಳಗೆ, ನೀರ್-ಕಣ್ಣುನೀರು, ಕಣ್ಣೈ-ಕಣ್ಣನ್ನು ಮೀರಿ, ಮಲ್‌ಗ-ಹೊರಡುವಂತೆ, ನಿನ್ರು-ನಿಂತು, ಕಡಲ್‌ವಣ್ಣನ್-ಸಮುದ್ರದಂತೆ ಗಂಭೀರಸ್ವಭಾವನು, ಎನ್ನುಮ್-ಎಂದು ಹೇಳುತ್ತಾಳೆ. ಅನ್ನೇ-ಅಯ್ಯೋ!, ಎನ್‌ಪೆಣ್ಣೈ-ನನ್ನ ಈ ಹೆಣ್ಣನ್ನು, ಪೆರುಮಯಲ್–

(ಈರೀತಿ) ಅತ್ಯಧಿಕವಾದ ಭ್ರಾನ್ತಿಗೆ ವಶ್ಯವಾಗುವಂತೆ, ಶೆಯ್ದಾರ್‌ಕ್ಕು-ಮಾಡಿದ ಆ ಭಗವನ್ತನಿಗೆ, ಪೆಯ್‌ವಳೈಯಿರಾರೇ-ಜಿನ್ನಾದ ಬಳೆಯನ್ನು ಧರಿಸಿ ಇರುವ ಸ್ತ್ರೀಗಳೇ, ಎ್ಏ-ಏನನ್ನು, ಶೆಯ್‌ಕೇ್ಏ-ಮಾಡಬಲ್ಲೆನು ?

( ಸ-ಗಾ-ರ ॥ )—

ಭೂಮಿಂ ಸ್ಪೃಷ್ಟ್ವಾ ಕಿಲೇಯಂ ವದತಿ ಮಮ ಸುತಾ ವಾಮನೇನೈವ ಪೂರ್ವಂ
ಪಾದಾಕ್ರಾನ್ತಾ ಧರೇಯಂ ತ್ವಿತಿ ! ಗಗನತಲಂ ವೀಕ್ಷ್ಯ ತದ್ವಾಸದೇಶಮ್ ।
ಶ್ರೀವೈಕುಣ್ಠಂ ಹಿ ವಕ್ತಿ ! ಸ್ವಕರಯುಗಮುಖಾದ್ದರ್ಶಯನ್ತೀ ಚ ಸಾಶ್ರುಃ
ಪ್ರಾಹೈನಂ ವಾರ್ಧಿವರ್ಣಂ! ಕಿಮುಹಹ ಕರವೈ ಮತ್ಸುತೋನ್ಮಾದಕರ್ತುಃ?॥

ತಾ॥ (ತಾಯಿಯು ಮಗಳ ಅವಸ್ಥೆಯನ್ನು ಇತರರಿಗೆ ವರ್ಣಿಸಿ – "ಇದಕ್ಕೆ ನಾನು ಏನುಮಾಡಲಿ ? " ಎನ್ನುತ್ತಾಳೆ.) ಭೂಮಿಯನ್ನು ಮುಟ್ಟಿ ತೋರಿಸಿ ಇದು ವಾಮನಾವತಾರದಲ್ಲಿ ಶ್ರೀ ಭಗವನ್ತನು ಅಳೆದುಕೊಂಡ ಭೂಮಿಯೆನ್ನುತ್ತಾಳೆ. ಆಕಾಶವನ್ನು ಕುರಿತು ಅಂಜಲಿಮಾಡಿ ಅವನು ನಿತ್ಯವಾಸಮಾಡುವ ಪರಮಪದವೆನ್ನುತ್ತಾಳೆ. ಕಣ್ಣನೀರನ್ನು ಸುರಿಸುತ್ತ—"ಅವನು ಸಮುದ್ರದಂತೆ ಗಂಭೀರ ಸ್ವಭಾವನು" ಎನ್ನುತ್ತಾಳೆ. ಅಯ್ಯೋ ! ನನ್ನ ಮಗಳನ್ನು ಈಪ್ರಕಾರ ಭ್ರಾನ್ತೆಯಾಗುವಂತೆ ಮಾಡಿದ ಮಾಯಾಚೇಷ್ಟಿತನಿಗೆ (ಸರ್ವೇಶ್ವರನಿಗೆ) ನಾನೇನು ಮಾಡಬಲ್ಲೆನು ? (ನೀವೇ ಹೇಳಿರಿ—ಎನ್ನುತ್ತಾಳೆ.)

(೨) ಪೆಯ್‌ವಳೈ ಕ್ಕೈಕಳೈ ಕ್ಕೂಪ್ಪಿ ಪ್ಪಿರಾ್ಏ ಕಿಡಕ್ಕುಮ್ ಕಡಲೆನ್ನುಮ್,
ಶೆಯ್ಯದೋರ್ ನಾಯಿಱ್ರೈಕ್ಕಾಟ್ಟಿ ಚ್ಚಿರೀದರನ್ಮೂರ್ತ್ತಿ ಯಿಾದೆನ್ನುಮ್,
ನೈಯುಮ್ ಕಣ್ಣೀರ್ ಮಲ್‌ಕ ನಿನ್ರು ನಾರಣನೆನ್ನುಮನ್ನೇಯೆ್ಏ
ತೆಯ್‌ವವುರುವಿಲ್ ಶಿಱುಮಾ್ಏ ಶೆಯ್‌ಕಿನ್ರದೊನ್ರುಜಿಯೇನೇ.

ಪ್ರ॥ ಪೆಯ್‌ವಳೈ-ಶಿಥಿಲವಾದ ಬಳೆಗಳುಳ್ಳ, ಕೈಕಳೈ-ಹಸ್ತಗಳನ್ನು, ಕೂಪ್ಪಿ-ಜೋಡಿಸಿ (ಅಂಜಲಿಮಾಡಿ), (ಸಮುದ್ರವನ್ನುನೋಡಿ) ಪಿರಾ್ಏ – ಸ್ವಾಮಿಯು

(ದೇವತೆಗಳಿಗೆ ಉಪಕಾರಕನಾಗಿರುವವನು), ಕಿಡಕ್ಕುವರ್-ಶಯನಮಾಡಿರುವ, ಕಡಲ್-ಸಮುದ್ರವು, ಎನ್ನುಮ್-ಎಂದು ಹೇಳುತ್ತಾಳೆ. ಶೆಯ್ಯದು – ಕೆಂಪಾಗಿ ರುವ ತೇಜಸ್ಸಿನೊಂದಿಗೆ ಕೂಡಿ, ಓರ್-ಅದ್ವಿತೀಯವಾದ, ಞಾಯಿತ್ರ್ಯ-ಆದಿತ್ಯ ನನ್ನು (ಉದಯಕಾಲದ ಸೂರ್ಯನನ್ನು), ಕಾಟ್ಟಿ-ತೋರಿಸಿ, ಶಿರೀದರ್ರಮೂರ್ತಿ- ಶ್ರೀಧರನ ವಾಸಸ್ಥಾನವಾದ ಸೂರ್ಯಬಿಂಬವು, ಈದು-ಇದು, ಎನ್ನುಮ್-ಎಂದು ಹೇಳುತ್ತಾಳೆ. ನೈಯುಮ್ – (ಇಂತಹ ಶರಣ್ಯನನ್ನೂ ಉಪಾಸ್ಯನನ್ನೂ ತಾನು ಆಶ್ರಯಿಸಿ ಅನುಭವಿಸಲಿಲ್ಲವೆಂದು) ಕೃಶೆಯಾಗುತ್ತಿದಾಳೆ. ಕಣ್ಣೀರ್-ಕಣ್ಣುನೀರು, ಮಲ್ಕ-ಸ್ರವಿಸುವಂತೆ, ನಿನ್ರು-ನಿಂತು, ನಾರಣ-ನಾರಾಯಣನು, ಎನ್ನುಮ್- ಎನ್ನುತ್ತಾಳೆ. ಅನ್ನೇ!-ಅಮ್ಮಾ (ಅಯ್ಯೋ!), ಎನ್-ನನ್ನ, ತೆಯ್ವವುರುವಿಲ್- ಅಪ್ರಾಕೃತಶರೀರವುಳ್ಳವಳಾಗಿ, ಶಿಱು-ಮುಗ್ಧೆಯಾದ, ಮರ್-ಹುಲ್ಲೇಕರುವಿನಂತೆ ಸುಕುಮಾರಿಯಾದ ಇವಳು, ಶೆಯ್‌ಕಿನ್ರದು-ಮಾಡುವ ಕೆಲಸವು, ಒನ್ರು-ಒಂದನ್ನೂ, ಅಱಿಯೇನೇ-ನಾನು ತಿಳಿಯಲಾರೆನು. (ಏನುಮಾಡಲಿ?)

( ಸ-ಗಾ-ರ || )—

> ಕೃತ್ವಾ ಚಾಂಜಲಿಬನ್ಧಮೇವ ಶಿಥಿಲೀಭೂತಸ್ವಭೂಷಾತ್ಕರ-
> ದ್ವಂದ್ವಾದ್ವಾರಿನಿಧಿಂ ಪ್ರದರ್ಶ್ಯ ವದತಿ ಶ್ರೀಶಸ್ಯ ವಾಸಸ್ಥಲಮ್ ।
> ತೇಜೋರಾಶಿನಿಧಿಂ ಪ್ರದರ್ಶ್ಯ ಚ ರವಿಂ ಶ್ರೀಶಸ್ಯ ಬಿಮ್ಬೋಽಯಮಿ-
> ತ್ಯೇವಂ ಮೇ ತನುಜಾಽಶ್ರುಪೂರ್ಣನಯನಾ ನಾರಾಯಣೇತ್ಯಾಃ !
> ಕಥಮ್ ? ||

ತಾ|| (ಅವನೊಡನೆ ಸಂಬನ್ಧವುಳ್ಳ ಸಮುದ್ರವನ್ನೂ ಆದಿತ್ಯನನ್ನೂ ಕಣ್ಡು ಮೋಹಾವಿಷ್ಟೆಯಾಗುತ್ತಾಳೆಂದು—ಹೇಳುತ್ತಾಳೆ.) ಇವಳು ಸಮುದ್ರವನ್ನು ನೋಡಿ ಅಂಜಲಿಮಾಡಿ ಅವನು ಶಯನಮಾಡಿರುವ ಕ್ಷೀರಸಮುದ್ರವೆನ್ನುತ್ತಾಳೆ. ಉದಯಕಾಲದ ಸೂರ್ಯಬಿಂಬವನ್ನು ನೋಡಿ ಇದು ಶ್ರೀಧರನ ವಾಸಸ್ಥಾನವೆನ್ನು ತ್ತಾಳೆ. ತಾನು ಅವನನ್ನು ಅನುಭವಿಸಲಿಲ್ಲವೆಂದು ಚಿನ್ತೆಯಿಂದ ಶೈಥಿಲ್ಯವಂ ಪಡೆದು, ಕಣ್ಣುನೀರು ಸುರಿಸಿ, ನಾರಾಯಣ ಎನ್ನುತ್ತಾಳೆ. ಅಯ್ಯೋ! ಹುಲ್ಲೇ ಕರುವಿನಂತಿರುವ ಅಪ್ರಾಕೃತ ಶರೀರವುಳ್ಳ ಈ ನನ್ನ ಮಗಳು ಮಾಡುವ ಕೆಲಸವು ಇಂತಹುದೆಂದು ತಿಳಿಯಲಾರೆನು. ಏನುಮಾಡಲಿ ?

(೩) ಅಱಿಯುಮ್ ಶೆನ್ತೀಯೈ ತೞುವಿ ಯಚ್ಚುದನೆನ್ನುಮ್
ಮೆಯ್‌ವೇವಾಳ್,
ಎಱಿಯುಮ್ ತಣ್‌ಕಾಱ್ಱೈ ತೞುವಿ ಯೆನ್ನುಡೈ
ಕ್ಕೋವಿನ್ದನೆನ್ನುಮ್,
ವೆಱಿಕೊಳ್ ತುೞಾಯ್‌ಮಲರ್ ನಾಱುಮ್ ವಿನೈಯುಡೈ-
ಯಾಟ್ಟಿಯೇನ್ ಪೆಱ್ಱ,
ಶೆಱಿವಳೈಮುನ್ಕೈ ಶ್ಚಿಱುಮಾನ್ ಶೆಯ್‌ಕಿನ್ಱದೆನ್
ಕಣ್ಣುಕ್ಕೊನ್ಱೇ.

ಪ್ರ|| ಅಱಿಯುಮ್-ಸುಡುವುದೆಂದು ಚೆನ್ನಾಗಿ ತಿಳಿಯಲ್ಪಟ್ಟಿರುವ, ಶೆನ್ ತೀಯೈ-ಕೆಂಪಗೆ ಇರುವ ಅಗ್ನಿಯನ್ನು, ತೞುವಿ-(ತೇಜೋಮಯನಾದ ಭಗವನ್ತನೆಂದು) ಮೇಲೆ ಬಿದ್ದು ಆಲಿಂಗಿಸಿ, ಅಚ್ಚುದನ್ ಎನ್ನುಮ್-ಅಚ್ಯುತನು (ನನ್ನನ್ನು ಕೈಬಿಡದವನು), ಎನ್ನುಮ್-ಎನ್ನುತ್ತಾಳೆ. (ಹೀಗೆ ಮಾಡಿದಾಗ್ಯೂ) ಮೆಯ್‌ವೇವಾಳ್ - ಶರೀರವು ಬೆಂದುಹೋಗದವಳಾಗಿದಾಳೆ. (ಅಗ್ನಿಯು ಅವನಲ್ಲಿ ಪ್ರೀತಿಯುಳ್ಳ ಇವಳನ್ನು ಸುಡುವುದಿಲ್ಲ), ಎಱಿಯುಮ್-ಬೀಸುವ, ತಣ್-ಶೀತಳವಾದ, ಕಾಱ್ಱೈ-ಗಾಳಿಯನ್ನು, ತೞುವಿ-ಆಲಿಂಗಿಸಿ (ಅದು ತಣ್ಣಗೆ ಸನ್ತಾಪಹರವಾಗಿರುವುದರಿಂದ ಅವನೇ ಯೆಂದು ಭಾವನೆಯಿಂದ ಆಲಿಂಗಿಸಿ), ಎನ್ನುಡೈ-ನನಗೆ ಭವ್ಯನಾದ, ಕೋವಿನ್ದನ್-ಗೋವಿನ್ದನು, ಎನ್ನುಮ್-ಎಂದು ಹೇಳುತ್ತಾಳೆ. ವೆಱಿಕೊಳ್-ಪರಿಮಳ ಭರಿತವಾದ, ತುೞಾಯ್‌ಮಲರ್-ತುಳಸೀದಳವು, ನಾಱುಮ್-ಸುಗನ್ಧವನ್ನುಂಟುಮಾಡುತ್ತಿರುವುದು (ಅವನು ಇವಳಿಗೆ ಈ ಸುಗನ್ಧವನ್ನುಂಟುಮಾಡಿರಬಹುದು). ವಿನೈಯುಡೈಯಾಟ್ಟಿಯೇನ್-(ಹೀಗೆ ಇವಳ ದಶೆಯನ್ನು ನೋಡಬೇಕಾದಷ್ಟು) ಪಾಪಭರಿತೆಯಾದ ನಾನು, ಪೆಱ್ಱ-ಹೆತ್ತ, ಶೆಱಿವಳೈ-(ಕೈಗಳಿಗೆ ಬಿಗಿಯಾಗಿ) ಸೇರಿಕೊಂಡಿರುವ ಬಳೆಗಳುಳ್ಳ, ಮುನ್‌ಕೈ-ಮುಂಗೈಗಳುಳ್ಳ, ಶಿಱುಮಾನ್ - ಚಿಕ್ಕ ಹುಲ್ಲೇಕರುವಿನಂತೆ ಇರುವ ಇವಳು, ಶೆಯ್‌ಕಿನ್ಱದು - ಮಾಡುವ ಕೆಲಸವು, ಎನ್ ಕಣ್ಣುಕ್ಕು-ನನ್ನ ಕಣ್ಣಿಗೆ, ಒನ್ಱೇ-ಒಂದೇ ವಿಧವೇ ? (ಭ್ರಾನ್ತಿಯಿಂದ ಅನೇಕ ಪ್ರಕಾರವಾಗಿದೆಯೆಂದು ಭಾವವು.)

( ಸ-ಗಾ-ರ || )—

ಆಲಿಂಗ್ಯಾಗ್ನಿಮಯಂ ಮಮಾಚ್ಯುತ ಇತಿ ಪ್ರೇಮ್ಣೋಜ್ಜ್ವಲಂ ಮೆ ಸುತಾ-
ಚಿತ್ರಂ ನೈವ ಹಿ ದಹ್ಯತೇ ಚ ಪವನಂ ಸ್ಪೃಷ್ಟ್ವಾಽಪಿ ಚಾಶ್ಲಿಷ್ಯ ಚ |
ಗೋವಿನ್ದೋ ಮಮ ಸೋಽಯಮಿತ್ಯಪಿ ವದೇದ್ಗನ್ಧಸ್ತುಲಸ್ಯಾ ಭವೇತ್-
ಪಾಪಿನ್ಯಾಽಸ್ಯ ನ ವೇದ್ಯತೇ ಕಿಲ ಮಯಾ ಕಿಂ ಕಿಂ ಕರೋತಿ ಭ್ರಮಾತ್ ||

ತಾ|| (ಇವಳ ಅತಿಪ್ರವೃತ್ತಿಗಳು ಅಸಂಖ್ಯಾತವಾಗಿವೆಯೆಂದು ಅಗ್ನಿ ವಾಯು ಪ್ರಭೃತಿಗಳ ವಿಷಯದಲ್ಲಿ ಇವಳ ಪ್ರವೃತ್ತಿಯನ್ನು ವರ್ಣಿಸುತ್ತಾಳೆ.) ಜ್ವಲಿಸುತ್ತಿರುವ ಅಗ್ನಿಯನ್ನು ಆಲಿಂಗಿಸಿ "ತೇಜೋಮಯನಾದ ನನ್ನ ಅಚ್ಯುತನು" ಎನ್ನುತ್ತಾಳೆ. ತಣ್ಣಗೆ ಬೀಸುತ್ತಿರುವ ಗಾಳಿಯನ್ನು ಆಲಿಂಗಿಸಿ "ನನ್ನ ಗೋವಿನ್ದನು" ಎನ್ನುತ್ತಾಳೆ. ಅವನ ದಿವ್ಯ ತುಳಸೀಗನ್ಧವೂ ಕೂಡ ಇವಳ ಸಮೀಪವಲ್ಲಿ ಪರಿಮಳಿಸುತ್ತಿರುವುದು. ಇಂತಹ ದುರವಸ್ಥೆಯನ್ನು ನೋಡಬೇಕಾದ ಪಾಪವುಳ್ಳ ನನ್ನ ಈ ಮುಗ್ಧಹರಿಣೀ ಸದೃಶೆಯಾದ ಕನ್ಯೆಯು ಮಾಡುವುದು ಒಂದುವಿಧವೇ? ಹೀಗೆ ಭ್ರಾನ್ತೆಯಾದ ಇವಳು ಏನೇನು ಮಾಡುತ್ತಿರುವಳೋ ?

(೪) ಒನ್ಱಿಯತಿಙ್ಗಳೈಕ್ಕಾಟ್ಟಿ ಯೊಳಿಮಣಿವಣ್ಣನೇ ಯೆನ್ನುಮ್,
ನಿನ್ಱ ಕುನ್ಱತ್ತಿನೈ ನೋಕ್ಕಿ ನೆಡುಮಾಲೇ ವಾವೆನ್ಱು ಕೂವುಮ್,
ನನ್ಱು ಪೆಯ್ಯುಮ್ ಮಳೈಕಾಣಿಲ್ ನಾರಣ‌ನ್ ವನ್ದಾನೆನ್ಱಾಲುಮ್,
ಎನ್ಱಿನಮೈಯಲ್‌ಕಳ್ ಶೆಯ್ದಾರೆನ್ನುಡೈ
ಕೋಮಳತ್ತೈಯೇ.

ಪ್ರ|| ಒನ್ಱಿಯ-ಸಕಲಕಲಾಪೂರ್ಣವಾದ, ತಿಙ್ಗಳೈ-ಚನ್ದ್ರನನ್ನು, ಕಾಟ್ಟಿ-ತೋರಿಸಿ, ಒಳಿಮಣಿವಣ್ಣನೇ-(ಕಾನ್ತನೇ ಎಂದು ಭ್ರಮಿಸಿ) ಶುದ್ಧಸ್ಫಟಿಕಮಣಿ ವರ್ಣನಾದ ನನ್ನ ಸ್ವಾಮಿಯೇ !, ಎನ್ನುಮ್-ಎನ್ನುತ್ತಾಳೆ. ನಿನ್ಱ-ನಿಂತಿರುವ, ಕುನ್ಱತ್ತಿನೈ-ಪರ್ವತವನ್ನು, ನೋಕ್ಕಿ-ನೋಡಿ, ನೆಡುಮಾಲೇ-(ನಿನ್ನ ಶರೀರದಂತೆ) ಅತ್ಯುಚ್ಚವಾದ ಸ್ನೇಹವುಳ್ಳ ನನ್ನ ಸ್ವಾಮಿಯೇ !, ವಾ-(ಯಾತಕ್ಕೆ ದೂರದಲ್ಲಿ ನಿಂತಿರುತ್ತೀಯೆ?) ನನ್ನ ಸಮೀಪಕ್ಕೆ ಬಾ, ಎನ್ಱು – ಎಂದು, ಕೂವುಮ್ – (ಪ್ರೀತಿಯಿಂದ) ಕರೆಯುತ್ತಿದಾಳೆ. ನನ್ಱು-ಚೆನ್ನಾಗಿ, ಪೆಯ್ಯುಮ್-ವರ್ಷಿಸುವ, ಮಳೈ-ಮೇಘವನ್ನು, ಕಾಣಿಲ್-ಕಂಡರೆ, ನಾರಣನ್ – (ನಾರಶಬ್ದವಾಚ್ಯವಾದ

ಜಲಗಳಿಗೆ ಆಶ್ರಯಭೂತನಾದ) ನಾರಾಯಣನು, ವನ್ದಾ಼ನ್-(ನನ್ನ ಸನ್ತಾಪವನ್ನು ನಾಶಪಡಿಸಲು) ಬಂದನು, ಎನ್ರು-ಎಂದು, ಆಲುಮ್-ಸಂಭ್ರಮದೊಡನೆ ನರ್ತನ ಮಾಡುವಳು. ಎನ್ನುಡೈಯ - ನನ್ನ, ಕೋಮಳತ್ತೈ - ಸುಕುಮಾರ ಸ್ವಭಾವ ವುಳ್ಳ ಈ ಕನ್ಯೆಯನ್ನು, ಎನ್ರು-ಯಾವಾಗ, ಇನ-ಈ ಪ್ರಕಾರವಾದ, ಮೈಯಲ್ ಕಳ್-ಭ್ರಮುಗಳನ್ನು ಹೊಂದುವಂತೆ, ಶೆಯ್ದಾರ್-ಮಾಡಿದರೋ !

( ಸ-ಗಾ-ರೆ || )—

ಚನ್ದ್ರಂ ಪೂರ್ಣಕಲಂ ಪ್ರದರ್ಶ್ಯ ಮಣಿವರ್ಣಂ ಶ್ರೀಹರಿಂ ತಂ ವದೇ-
ದದ್ರಿಂ ವೀಕ್ಷ್ಯ ಕಿಲ ಸ್ಥಿರಾ ಪ್ರಣಯಿನಾ ತಂ ನಾಯಕಂ ಚಾಹ್ವಯೇತ್ |
ವರ್ಷನ್ತಂ ಚ ವಿಲೋಕ್ಯ ವಾರಿದಮಿಯಂ ನಾರಾಯಣಾ ತ್ವಾಗತಂ
ಮತ್ವಾ ನೃತ್ಯತಿ ಕೋಮಲಾ ಮಮ ಸುತಾ ಭ್ರಾನ್ತಾ ಕೃತಾ ಸಾಂಪ್ರತಮ್||

ತಾ|| (ಉಜ್ಜ್ವಲವಾಗಿಯೂ ಉತ್ತುಂಗವಾಗಿಯೂ ಶ್ರಮಹರವಾಗಿಯೂ ಇರುವ ಭಗವನ್ತನ ದಿವ್ಯಶರೀರವನ್ನು ಸ್ಮರಿಸಿ, ಚನ್ದ್ರನನ್ನೂ ಪರ್ವತವನ್ನೂ ಮೇಘವನ್ನೂ ನೋಡಿ ಅವನೇ ಎಂದು ಭ್ರಾನ್ತಿಯಾಗಿದಾಳೆಂದು ಹೇಳುತ್ತಾಳೆ.) ಪೂರ್ಣಚನ್ದ್ರನನ್ನು ತೋರಿಸಿ, ಶುದ್ಧಸ್ಫಟಿಕವರ್ಣನೇ-ಎನ್ನುತ್ತಾಳೆ. ನಿಂತಿರುವ ಪರ್ವತವನ್ನು ನೋಡಿ ಅತ್ಯುನ್ನತ ಪ್ರೀತಿಯುಕ್ತನಾದ ಸ್ವಾಮಿಯೇ! ಬಾ—ಎಂದು ಕರೆಯುತ್ತಾಳೆ. ವರ್ಷಿಸುವ ಮೇಘವನ್ನು ಕಂಡರೆ ನಾರಾಯಣನು ಬಂದನು— ಎಂದು ನರ್ತನಮಾಡುವಳು. ನನ್ನ ಈ ಸುಕುಮಾರಿಯಾದ ಕನ್ಯೆಗೆ ಈ ಭ್ರಮು ಗಳನ್ನೆಲ್ಲಾ ಅವನು ಯಾವಾಗ ಉಂಟುಮಾಡಿದನೋ ! (ಇವುಗಳಿಗೆಲ್ಲಾ ಅವಧಿ ಯುಂಟೋ ?—ಎಂದು ಭಾವವು).

(೫) ಕೋಮಳವಾನ್ ಕನ್ರು ಪ್ಪುಲ್ಕಿ ಕೋಕಿವಿನ್ದನ್
ಮೇಯತ್ತನವೆನ್ನುಮ್,
ಪೋಮಿಳನಾಗತ್ತಿನ್ ಪಿನ್ ಪೋಯವನ್ ಕಿಡಕ್ಕೈ
ಯಿದೆನ್ನುಮ್,
ಆಮಳವೊನ್ರುಮರಿಯೇನರುವಿನೈಯಾಟ್ಟಿಯೇನ್ ಪೆಶ್ರ,
ಕೋಮಳವಲ್ಲಿಯೈ ಮಾಯೋನ್ ಮಾಲ್ಶೆಯ್ದು
ಶೆಯ್‌ಕಿನ್ರ ಕೂತ್ತೇ.

ಪ್ರ|| ಕೋಮಳಮ್-ಎಳೇದಾದ, ವಾ-ದೊಡ್ಡದಾದ, ಕನ್ಯೈ-ಕರುಗಳನ್ನು, ತ್ರುವಿ-ತಬ್ಬಿಕೊಂಡು, ಕೋವಿನ್ದ-ಗೋವಿನ್ದನು, ಮೇಯ್ತ್ತನ-ಮೇಯಿಸಿದ ಕರುಗಳು, ಎನ್ನುಮ್-ಎನ್ನುತ್ತಾಳೆ. ಪೋಮ್ - (ತಾನಾಗಿ ಮನಸ್ಸುಬಂದಂತೆ) ಹೋಗುತ್ತಿರುವ, ಇಳನಾಗತ್ತಿ-ಎಳೇ ಸರ್ಪದ, ಪಿ-ಹಿಂದೆ, ಪೋಯ್-ಹೋಗಿ, ಅವಕಿಡಕ್ಕೈ-ಅವನು ಶಯನಮಾಡುವ ಹಾಸಿಗೆ, ಈದು-ಇದು, ಎನ್ನುಮ್-ಎಂದು ಹೇಳುತ್ತಿದಾಳೆ. ಅರು-ಅವಿನಾಶ್ಯವಾದ, ವಿನೈಯಾಟ್ಟಿಯೇ - ಪ್ರಬಲವಾದ ಪಾಪವುಳ್ಳ ನಾನು, ಪೆತ್ತ-ಹೆತ್ತ, ಕೋಮಳಮ್-ಮೃದುಸ್ವಭಾವೆಯಾದ, ವಲ್ಲಿಯೈ-ಲತೆಯಂತೆ ಭೂಮಿಯಲ್ಲಿ ಬಿದ್ದು ಹೊರಳಾಡುವ ಇವಳನ್ನು, ಮಾಯೋ-ಆಶ್ಚರ್ಯಗುಣಚೇಷ್ಟಿತಗಳುಳ್ಳವನು, ಮಾಲ್ಶೆಯ್ದು-ಹುಚ್ಚುಹಿಡಿಸಿ, ಶೆಯ್ಕಿನ - ಮಾಡುತ್ತಿರುವ, ಕೊತ್ತು-ಲೀಲೆಯು, ಆವಾಳವು-ಎಲ್ಲಿಯವರೆಗೆ ವ್ಯಾಪಿಸುವುದೆಂದು, ಒನ್ರುಮ್-ಒಂದೂ, ಅತ್ತಿಯೇ-ತಿಳಿಯೆನು. (ಆಣ್ಕನ್ರೈ-ಎಂದೂ ಪಾಠವಿದೆ. ಗಂಡು ಕರುಗಳನ್ನು-ಎಂದು ಅರ್ಥ.)

( ಸ-ಗಾ-ರ || )—

ವತ್ಸಾನಾಶ್ಲಿಷ್ಯ ಸೇಯಂ ಸುತರುಣವಯಸಸ್ತೇ ಚ ಗೋವಿನ್ದಪಾಲ್ಯಾ
ಇತ್ಯೇವಾಹ ಸ್ವಯಂ ಚಾಪ್ಯನುಸರತಿ ಹಠಾತ್ಸರ್ಪಮೇವ ಪ್ರಯಾನ್ತಮ್ |
ತಸ್ಯೇಯಂ ಭಾತಿ ಶಯ್ಯೇತ್ಯಹಹ ! ಮಮ ಸುತಾಮೀದೃಶೀಂ ಭ್ರಾನ್ತಚಿತ್ತಾಂ
ಮಾಯಾವೀ ಕೋಮಲಾಂ ಕಿಂ ಬತ ! ಬತ ! ಕುರುತೇ ಹನ್ತ ! ವಲ್ಲೀಂ ನ ಜಾನೇ ||

ತಾ|| (ಅವನ ರಕ್ಷಕತ್ವವನ್ನು ಸ್ಮರಿಸಿ ಕರುಗಳನ್ನು ನೋಡಿ ಅವನು ರಕ್ಷಿಸಿದ ಕರುಗಳೆಂದೂ, ಸರ್ಪವನ್ನು ನೋಡಿ ಅವನು ರಕ್ಷಣಾರ್ಥವಾಗಿ ನಿದ್ರೆಮಾಡುವ ಹಾಸಿಗೆಯೆಂದೂ ಭ್ರಾನ್ತಿಯಾಗುತ್ತಿದಾಳೆಂದು ತಾಯಿಯು ಅತ್ಯನ್ತ ಚಿನ್ತಾಕ್ರಾನ್ತೆಯಾಗುತ್ತಾಳೆ.) ಎಳೇ (ದೊಡ್ಡ) ಕರುಗಳನ್ನು ಇವಳು ತಬ್ಬಿಕೊಂಡು 'ನಮ್ಮ ಗೋವಿನ್ದನು ಮೇಯಿಸಿದ ಕರುಗಳು'— ಎನ್ನುತ್ತಾಳೆ ಮನಸ್ಸುಬಂದಂತೆ ಸಂಚರಿಸುತ್ತಿರುವ ಸರ್ಪಶಿಶುವನ್ನು ನೋಡಿ ಇದು ಅವನ ಹಾಸಿಗೆಯೆಂದು ಅದರ

ಹಿಂದೆ ಹೋಗುತ್ತಾಳೆ. ಪ್ರಬಲವಾದ ಪಾಪವನ್ನು ಮಾಡಿರುವುದರಿಂದ ನಾನು ಇದನ್ನೆಲ್ಲಾ ನೋಡಬೇಕಾಗಿದೆ. ನನ್ನ ಈ ಕೋಮಳವಲ್ಲಿಗೆ ಹೀಗೆ ಹುಚ್ಚು ಹಿಡಿಸಿರುವ ಮಾಯಾಚೇಷ್ಟಿತನ ಲೀಲೆಯು ಹೇಗೆ ಪರಿಣಮಿಸುವುದೋ ನಾನು ತಿಳಿಯಲಾರೆನು—(ಎಂದು ತಾಯಿಯು ಸನ್ತಪ್ತೆಯಾಗುತ್ತಾಳೆ.)

(೬) ಕೂತ್ತರ್ ಕುಡಮೆಡುತ್ತಾಡಿಲ್ ಕೋವಿನ್ದನಾಮೆನಾ
ವೋಡುಮ್,
ವಾಯ್ತ್ತ ಕುೞಲೋಶೈಕೇಳ್ಕಿಲ್ ಮಾಯವನೆನ್ರು
ಮೈಯಾಕ್ಕುಮ್,
ಆಯ್ಚ್ಚಿಯರ್ ವೆಣ್ಣೆಯ್ಕಳ್ ಕಾಣಿಲವನುಣ್ಡ
ವೆಣ್ಣೆಯಿದೆನ್ನುಮ್,
ಪೇಯ್ಚ್ಚಿ ಮುಲೈ ಶುವೈತ್ತಾರ್ಕ್ಕೆನ್ ಪೆಣ್ಕೊಡಿ
ಯೇಱಿಯ ಪಿತ್ತೇ.

ಪ್ರ|| ಕೂತ್ತರ್-ಲೀಲಾಪರವಶರು (ಆಟ ಆಡುವವರು), ಕುಡಮ್ ಎಡುತ್ತು -ಕುಂಭವನ್ನು ಎತ್ತಿ, ಆಡಿಲ್—ಆಡಿದರೆ, ಕೋವಿನ್ದ ಆಮೆನಾ—ಗೋವಿನ್ದನಾಗಿರ ಬಹುದೆಂದು, ಓಡುಮ್ – (ಇವಳು) ನೋಡುವುದಕ್ಕಾಗಿ ಓಡಿಹೋಗುವಳು. ವಾಯ್ತ್ತ- ಅತ್ಯನ್ತ ಸನ್ತಾಪಜನಕವಾದ (ಚಿತ್ತಾಕರ್ಷಕವಾದ), ಕುೞಲೋಶೈ- ವೇಣುಗಾನ ಧ್ವನಿಯನ್ನು, ಕೇಳ್ಕಿಲ್—ಕೇಳಿದರೆ, ಮಾಯವನ್ – (ಆಶ್ಚರ್ಯಭೂತ ನಾದ) ಕೃಷ್ಣನು, ಎನ್ರು – ಎಂದು,ಮೈಯಾಕ್ಕುಮ್ – ಮೋಹಿತೆಯಾಗುವಳು. ಆಯ್ಚ್ಚಿಯರ್—ಗೋಪಿಗಳ ಕೈಯಲ್ಲಿ, ವೆಣ್ಣೆಯ್ಕಳ್—ಬೆಣ್ಣೆಯ ಉಂಡೆಗಳನ್ನು, ಕಾಣಿಲ್—ಕಂಡರೆ, ಅವನ್ ಉಣ್ಡ – ಅವನು ಭಕ್ಷಿಸಿದ, ವೆಣ್ಣೆಯ್ – ಬೆಣ್ಣೆಯು, ಈದು ಎನ್ನುಮ್-ಇದೇ ಎನ್ನುವಳು. ಪೇಯ್ಚ್ಚಿಮುಲೈ-ಪೂತನೆಯ ಸ್ತನವನ್ನು, ಶುವೈತ್ತಾರ್ಕ್ಕು- ಹೀರಿ ಅವಳ ಪ್ರಾಣವನ್ನು ನಾಶಪಡಿಸಿ ತನ್ನನ್ನು ರಕ್ಷಿಸಿಕೊಂಡ ಮಹೋಪಕಾರಕನಾದ ಕೃಷ್ಣನಿಗೋಸ್ಕರ, ಕೊಡಿ—ಲತೆಯಂತೆ ಇರುವ, ಎನ್‌ಪೆಣ್ —ನನ್ನ ಈ ಕನ್ಯೆಯು, ಏಱಿಯ ಪಿತ್ತೇ-ಮಿತಿಮೀರಿ ತಲೆಗೆ ಹತ್ತಿರುವ ಹುಚ್ಚುಳ್ಳವ ಳಾಗಿದಾಳೆ. (ಏನು ಮಾಡಲಿ ?)

( ಸ–ಗಾ-ರ || )—

ಲೀಲಾಸಕ್ತಾ ಘಟೈಶ್ಚೇನ್ಮಮ ಕಿಲ ತನಯಾ ಚಾನುಯಾತ್ಯೇವ ಕೃಷ್ಣೋ
ಗೋವಿನ್ದೋಽಯಂ ಮಮೇತಿ ಭ್ರಮವಶಹೃದಯಾ ವೇಣುನಾದೇ
ಚ ಮುಗ್ಧಾ |
ಸೋಽಯಂ ಮಾಯಾತಿ ದೃಷ್ಟ್ವಾ ಸಪದಿ ಚ ನವನೀತಂ ತು
ತದ್ಭುಕ್ತಮಾಹ !
ಶ್ರೀಶಃ ಕಿಂ ಪೂತನಾಯಾ ಅಸುಹರಣಪಟುಃ ಕೋಮಲಾಂ ಮೇಽದ್ಯ
ಕುರ್ಯಾತ್ ? ||

ತಾ|| (ಇವಳಿಗೆ ಹಿಡಿದಿರುವ ಹುಚ್ಚನ್ನು ವರ್ಣಿಸುತ್ತಾಳೆ.) ಆಟ ಆಡುವವರು ಕುಂಭವನ್ನು ಎತ್ತಿ ಆಡಿದರೆ ಗೋವಿನ್ದನಾಗಿರಬಹುದೆಂದು ನೋಡುವುದಕ್ಕೆ ಓಡುತ್ತಾಳೆ. ವೇಣುಗಾನ ಧ್ವನಿಯನ್ನು ಕೇಳಿದರೆ ಕೃಷ್ಣನೇ ಎಂದು ಮೋಹಾವಿಷ್ಟೆಯಾಗುತ್ತಾಳೆ. ಗೋಪಿಗಳ ಕೈಯಲ್ಲಿ ಬೆಣ್ಣೆಯನ್ನು ಕಂಡರೆ ಅವನು ತಿಂದ ಬೆಣ್ಣೆಯು ಇದೇಯೆಂದು ಹೇಳುತ್ತಾಳೆ. ಪೂತನಾಪ್ರಾಣನಾಶಕನಾದ ಅವನ ವಿಷಯದಲ್ಲಿ ಈ ನನ್ನ ಕೋಮಳವಲ್ಲಿಗೆ ಹಿಡಿದಿರುವ ಹುಚ್ಚು ಮಿತಿಮೀರಿ ತಲೆಗೆ ಹತ್ತಿಹೋಗಿದೆ— ಏನುಮಾಡಲಿ ? ಇನ್ನೂ ಏನೇನು ಆಗುವುದೋ ? (ಎಂದು ತಾಯಿಯು ಚಿನ್ತಿಸುತ್ತಾಳೆ.)

(೭) ಏಱಿಯೆ ಪಿತ್ತಿನೋಡೆಲ್ಲಾವುಲಕುಮ್ ಕಣ್ಣನ್
ಪಡೈಪ್ಪೆನ್ನುಮ್,
ನೀಱು ಶೆವ್ವೇಯಿಡಕ್ಕಾಣಿಲ್ ನೆಡುಮಾಲಡಿಯಾ
ರೆನ್ಱೋಡುಮ್,
ನಾಱುತುೞಾಯ್ಮಲರ್ ಕಾಣಿಲ್ ನಾರಣನ್ ಕಣ್ಣಿ
ಯಾದೆನ್ನುಮ್,
ತೇಱಿಯುಮ್ ತೇಱಾದುಮ್ ಮಾಯೋನ್ ತಿಱತ್ತನಳೇ
ಯಿತ್ತಿರುವೇ.

ಪ್ರ|| ಏತ್ತಿಯ–ಅಧಿಕವಾಗಿ ಬೆಳೆದ, ಪಿತ್ತಿನೋಡು–ಭ್ರಮದೊಡನೆ ಕೂಡಿ, ಎಲ್ಲಾವುಲಕುಮ್–ಸಕಲಲೋಕಗಳೂ, ಕಣ್ಣನ್ ಪಡೈಪ್ಪು ಎನ್ನುಮ್–ಶ್ರೀಕೃಷ್ಣನಿಂದ ಸೃಷ್ಟಿಸಲ್ಪಟ್ಟವೆಂದು ಹೇಳುವಳು. ನೀಱು–ಭಸ್ಮವನ್ನು, ಶೆಯ್ಯೇ–ನೆಟ್ಟಗೆ, ಇಡ–ರೇಖಾರೂಪವಾಗಿ ಇಡುವುದನ್ನು, ಕಾಣಿಲ್–ಕಂಡರೆ, (ದ್ರವ್ಯವಿವೇಚನವಿಲ್ಲದೆ) ನೆಡುಮಾಲ್–ಆಶ್ರಿತವತ್ಸಲನಾದ ಸರ್ವೇಶ್ವರನ, ಅಡಿಯಾರ್–ಭಕ್ತೋತ್ತಮರು, ಎನ್ನು – ಎಂದು, ಓಡುಮ್ – ( ಅವರ ಸಮೀಪಕ್ಕೆ ) ಓಡಿಹೋಗುವಳು. ನಾಱು–ಪರಿಮಳಭರಿತವಾದ, ತುೞಾಯ್‌ಮಲರ್–ತುಳಸೀಗುಚ್ಛವನ್ನು, ಕಾಣಿಲ್–ನೋಡಿದರೆ, ನಾರಣನ್ ಕಣ್ಣಿ – ಸರ್ವಸ್ವಾಮಿಯಾದ ನಾರಾಯಣನ ಮಾಲೆ, ಈದು–ಇದು, ಎನ್ನುಮ್–ಎಂದು ಹೇಳುವಳು. (ಹೀಗೆ) ತೇಱಿಯುಮ್ ತೇಱಾದುಮ್–ಶಾನ್ತೆಯಾಗಿರುವಾಗಲೂ ಭ್ರಾನ್ತೆಯಾಗಿರುವಾಗಲೂ, ಇತ್ತಿರು–ಈ ಲಕ್ಷ್ಮಿಯು (ಆ ಸಾಕ್ಷಾಲ್ಲಕ್ಷ್ಮಿಯಂತೆ ಇಲ್ಲದೆ ಭ್ರಾನ್ತೆಯಾಗಿರುವ ಇವಳು), ಮಾಯೋನ್–ಆಶ್ಚರ್ಯಚೇಷ್ಟಿತನಾದ ಪರಾತ್ಪರನ ವಿಷಯದಲ್ಲಿ, ತಿಱತ್ತೆನಳ್–ಈ ಪ್ರಕಾರ ಮೋಹಾವಿಷ್ಟೆಯಾಗಿ ಅವನಿಗೇ ವಶ್ಯೆಯಾಗಿದಾಳೆ.

( ಸ–ಗಾ–ರ || )—

**ವಿಶ್ವಂ ಕೃಷ್ಣೇನ ಸೃಷ್ಟಂ ವದತಿ ಕಿಲ ಮಹಾಮೋಹನಶ್ಯಾ ಯದಿ ಸ್ಯಾ-**
**ದೂರ್ಧ್ವಾಂ ರೇಖಾಂ ವಿಲೋಕ್ಯ ಭ್ರಮತ ಇಹ ತದೀಯತ್ವಬುದ್ಧ್ಯಾ**
**ಽನುಧಾವೇತ್ |**
**ದೃಷ್ಟ್ವಾ ಸೇಯಂ ತುಳಸ್ಯಾ ದಳಮಪಿ ವದತಿ ಸ್ರಕ್ ನಾರಾಯಣಸ್ಯೇ-**
**ತ್ಯೇವಂ ಮುಗ್ಧಾಽಪ್ಯಮುಗ್ಧಾಽಪಿ ಚ ಕಿಲ ಕಮಲಾ ಮಾಯಿನಸ್ತಸ್ಯ ವಶ್ಯಾ||**

ತಾ|| ( ಇವಳು ಭ್ರಮಸಹಿತೆಯಾದಾಗಲೂ ಭ್ರಮರಹಿತೆಯಾದಾಗಲೂ ಯಾವಾಗಲೂ ಒಂದೇಸಮನಾಗಿ ಅವನಿಗೇ ವಶ್ಯೆಯಾಗಿದಾಳೆಂದು ತಾಯಿ ಹೇಳುತ್ತಾಳೆ.) ಅತ್ಯನ್ತ ಭ್ರಮವಶ್ಯೆಯಾಗಿ ಸಕಲಲೋಕಗಳೂ ಕೃಷ್ಣನಿಂದಲೇ ಸೃಷ್ಟಗಳೆಂದು ಹೇಳುತ್ತಾಳೆ. ಭಸ್ಮವನ್ನು ರೇಖಾರೂಪವಾಗಿ ನೆಟ್ಟಗೆ ಕಂಡರೆ ಊರ್ಧ್ವಪುಂಡ್ರವೆಂದು ಭಾವಿಸಿ ಸರ್ವೇಶ್ವರನ ಭಕ್ತೋತ್ತಮರೆಂದು ಅಲ್ಲಿಗೆ ಓಡಿಹೋಗುತ್ತಾಳೆ. ಪರಿಮಳವಿಶಿಷ್ಟವಾದ ತುಳಸಿಯನ್ನು ಕಂಡರೆ ಶ್ರೀಮನ್ನಾರಾಯಣನ ಮಾಲೆಯೆಂದು ಹೇಳುತ್ತಾಳೆ. ಈಪ್ರಕಾರ ಶಾನ್ತೆಯಾಗಿರುವಾಗಲೂ ಭ್ರಾನ್ತೆಯಾಗಿರುವಾಗಲೂ ಈ ಲಕ್ಷ್ಮಿಯು (ಈ ನನ್ನ ಕನ್ಯೆಯು) ಆ ಮಾಯಾಚೇಷ್ಟಿತನಿಗೇ ವಶ್ಯೆಯಾಗಿದಾಳೆ.

(೮) ತಿರುವುಡೈ ಮನ್ನರೈಕ್ಕಾಣಿಲ್ ತಿರುಮಾಲೈಕ್ಕಣ್ಡೇನೇ
ಯೆನ್ನುಮ್,
ಉರುವುಡೈ ವಣ್ಣಙ್ಗಳ್ ಕಾಣಿಲುಲಕಳನ್ದಾನೆನ್ರು ತುಳ್ಳುಮ್
ಕರುವುಡೈ ತ್ತೇವಿಲ್‌ಕಳೆಲ್ಲಾಮ್ ಕಡಲ್ವಣ್ಣನ್ ಕೋಯಿಲೇ
ಯೆನ್ನುಮ್,
ವೆರುವಿಲುಮ್ ವೀಙ್ಗಿಲುಮೋವಾಳ್ ಕಣ್ಣನ್ ಕೞಲ್‌ಕಳ್
ವಿರುಮ್ಬುಮೇ.

ಪ್ರ|| ತಿರು–ಪೂರ್ಣವಾದ ಐಶ್ವರ್ಯವನ್ನು, ಉಡೈ–ಪಡೆದಿರುವ, ಮನ್ನರೈ–ರಾಜರನ್ನು, ಕಾಣಿಲ್–ಕಂಡರೆ, ತಿರುಮಾಲೈ–(ಸಕಲ ಸಂಪದ್ವಿಶಿಷ್ಟನಾದ) ಶ್ರಿಯಃಪತಿಯನ್ನು, ಕಣ್ಡೇನೇ–ಕಣ್ಡೆನು, ಎನ್ನುಮ್–ಎನ್ನುವಳು. ಉರುವುಡೈ–ವಿಲಕ್ಷಣ ರೂಪಗಳುಳ್ಳ, ವಣ್ಣಙ್ಗಳ್–ಪದಾರ್ಥಗಳನ್ನು, ಕಾಣಿಲ್–ಕಂಡರೆ, ಉಲಕಳನ್ದಾನ್–ತ್ರಿವಿಕ್ರಮನಾಗಿ ಲೋಕಗಳನ್ನೆಲ್ಲಾ ಅಳೆದವನು, ಎನ್ರು–ಎಂದು, ತುಳ್ಳುಮ್–ಸಂಭ್ರಮದಿಂದ ನರ್ತನಮಾಡುವಳು. ಕರುವುಡೈ–ವಿಗ್ರಹಗಳುಳ್ಳ, ತೇವು ಇಲ್ ಕಳ್ ಎಲ್ಲಾಮ್ – ದೇವಾಲಯಗಳೆಲ್ಲಾ, ಕಡಲ್‌ವಣ್ಣನ್ – ನೀಲವರ್ಣನಾದ (ಸಮುದ್ರವರ್ಣನಾದ) ಸರ್ವೇಶ್ವರನ, ಕೋಯಿಲೇ–ದಿವ್ಯ ಕ್ಷೇತ್ರಗಳೇ, ಎನ್ನುಮ್–ಎನ್ನುವಳು. ವೆರುವಿಲುಮ್ – (ಬನ್ಧುಗಳನ್ನು ನೋಡಿ ಲಜ್ಜೆಯಿಂದ) ಭಯಪಡುವ ವೇಳೆಯಲ್ಲೂ, ವೀಙ್ಗಿಲುಮ್–ಆರ್ತಿಯಿಂದ ಮೋಹಾವಿಷ್ಟೆಯಾದ ವೇಳೆಯಲ್ಲೂ (ಎರಡು ಕಾಲದಲ್ಲೂ ಒಂದೇಸಮನಾಗಿ), ಓವಾಳ್–ಸನ್ತತವಾಗಿಯೇ, ಕಣ್ಣನ್‌ಕೞಲ್‌ಕಳ್–ಕೃಷ್ಣನ ಪಾದಗಳನ್ನೇ, ವಿರುಮ್ಬುಮ್–ಆದರಿಸುತ್ತಿದಾಳೆ.

( ಸ–ಗಾ–ರ || )—

**ಭೂಪಾಲಾನ್ ವೀಕ್ಷ್ಯ ಪೂರ್ಣಾನ್ ಹರಿರಯಮನಘಶ್ರೀಧರಶ್ಚೇತಿ ವಕ್ತಿ**
**ಭ್ರಾನ್ತಾ ನಾನಾಪದಾರ್ಥಾನಪಿ ವದತಿ ಹರಿಂ ಲೋಕಮಾತಾರಮೇವ |**
**ದೇವಾಗಾರಾಣಿ ವಕ್ತಿ ಸ್ವಯಮಪಿ ಸಹಿತಾನ್ ವಿಗ್ರಹೈರಾಲಯಾದೀನ್**
**ಭೀತಾ ವಾ ಹನ್ತ! ಮುಗ್ಧಾ ಸತತಮಪಿ ಭವೇತ್ ಕೃಷ್ಣಪಾದಾಬ್ಜಸಕ್ತಾ ||**

ತಾ|| (ಸರ್ವಕಾಲದಲ್ಲೂ ಅವನಲ್ಲಿಯೇ ಸಕ್ತಚಿತ್ತೆಯಾಗಿದಾಳೆಂದು ಹೇಳುತ್ತಾಳೆ.) ಐಶ್ವರ್ಯಪರಿಪೂರ್ಣರಾದ ರಾಜರನ್ನು ನೋಡಿ ಇವಳು ಶ್ರಿಯಃಪತಿಯನ್ನು ಕಂಡೆನೆಂದು ಹೇಳುತ್ತಾಳೆ. ವಿಲಕ್ಷಣವಾದ ನಾನಾಪದಾರ್ಥಗಳನ್ನು ಕಂಡರೆ ಸಕಲಲೋಕಗಳನ್ನೂ ಅಳೆದ (ತ್ರಿವಿಕ್ರಮನಾದ) ಸ್ವಾಮಿಯೆಂದು ಸಂಭ್ರಮ

ದಿಂದ ನರ್ತನಮಾಡುತ್ತಾಳೆ. ಯಾವ ವಿಗ್ರಹಗಳಾದರೂ ಉಳ್ಳ ಆಲಯಗಳನ್ನು ನೋಡಿ ಸರ್ವೇಶ್ವರನ ದಿವ್ಯಕ್ಷೇತ್ರಗಳೆಂದು ಹೇಳುತ್ತಾಳೆ. (ಹೀಗೆ) ಬನ್ಧುಗಳ ಭಯದಿಂದ ಶಾನ್ತೆಯಾಗಿರುವಾಗಲೂ ಆರ್ತಿಯಿಂದ ಮೋಹಾವಿಷ್ಟೆಯಾಗಿರುವಾಗಲೂ ಸನ್ತತವಾಗಿ ಶ್ರೀಕೃಷ್ಣನ ಪಾದಗಳನ್ನೇ ಆದರಿಸುತ್ತಿದಾಳೆ (ಅಪೇಕ್ಷಿಸುತ್ತಿದಾಳೆ).

(೯) ವಿರುಮ್ಬಿ ಪ್ಪಕವರ್ೈ ಕ್ಕಾಣಿಲ್ ವಿಯುಲಿಡಮುಂಣ್ಡಾನೇ
ಯೆನ್ನುಮ್,
ಕರುಮ್ ಪೆರುಮೇಗಙ್ಗಳ್ ಕಾಣಿಲ್ ಕಣ್ಣನೆನ್ಱೇಱಪ್ಪಱಕ್ಕುಮ್,
ಪೆರುಮ್ಪುಲವಾನಿರೈ ಕಾಣಿಲ್ ಪಿರಾನುಳನೆನ್ಱು ಪಿನ್ ಶೆಲ್ಲುಮ್,
ಅರುಮ್ಪೆಱಲ್ಪೆಣ್ಣಿನೈ ಮಾಯೋನಲಕ್ಕಣ್ ಯಯರ್ಪ್ಪಿಕ್ಕಿನ್ಱಾನೇ.

ಪ್ರ॥ ಪಕವರ್ೈ-ಸನ್ಯಾಸಿಗಳನ್ನು, ಕಾಣಿಲ್-ಕಂಡರೆ, ವಿರುಮ್ಬಿ-ಅತ್ಯಾದರವಂ ಮಾಡಿ, ವಿಯಲ್ಇಡಮ್ - ವಿಸ್ತೀರ್ಣವಾದ ಜಗತ್ತನ್ನು, ಉಣ್ಡಾನೇ-ಉದರದಲ್ಲಿಟ್ಟು ರಕ್ಷಿಸಿದವನೇ, ಎನ್ನುಮ್-ಎನ್ನುತ್ತಾಳೆ. ಕರುಮ್ ಪೆರುಮೇಗಙ್ಗಳ್-ನೀಲವಾದ ಮಹಾಮೇಘಗಳನ್ನು, ಕಾಣಿಲ್-ಕಂಡರೆ, ಕಣ್ಣನ್-ಕೃಷ್ಣನು, ಎನ್ಱು-ಎಂದು, ಏಱ - ಮೇಲೆ ಎದ್ದುಹೋಗಲು, ಪಱಕ್ಕುಮ್ - ಹಾರುತ್ತಿರುವಳು. ಪೆರುಮ್ - ದೊಡ್ಡ, ಪುಲ-ದರ್ಶನೀಯವಾದ, ಆನಿರೈ - ಪಶುಗಳ ಗುಂಪನ್ನು, ಕಾಣಿಲ್-ಕಂಡರೆ, ಪಿರಾನ್-(ಇವುಗಳನ್ನು ಮೇಯಿಸಿದ) ಸ್ವಾಮಿಯು, ಉಳನ್-(ಇವುಗಳ ಜೊತೆಯಲ್ಲಿ) ಬಂದಿರುವನು, ಎನ್ಱು-ಎಂದು, ಪಿನ್-ಅವುಗಳ ಹಿಂದೇ, ಶೆಲ್ಲುಮ್-ಹೋಗುತ್ತಿರುವಳು. ಪೆಱಲ್ ಅರುಮ್-ಹೊಂದಲಶಕ್ಯಳಾದ, ಪೆಣ್ಣಿನೈ-ಈ ಹೆಣ್ಣನ್ನು, ಮಾಯೋನ್ - ಮಾಯಾಚೇಷ್ಟಿತನಾದ ಅವನು, ಅಲಕ್ಕಣ್ - ಸನ್ತಾಪ ಪಡಿಸಿ, ಅಯರ್ಪ್ಪಿಕ್ಕಿನ್ಱಾನೇ-ಮೋಹಿಸುವಂತೆ ಮಾಡಿರುತ್ತಾನೆ.

( ಸ- ಗಾ-ರ ॥ )—

ದೃಷ್ಟ್ವಾ ಸನ್ಯಾಸಿವರ್ಗಾನ್ ವಿಪುಲತಮಜಗದ್ರಕ್ಷಕಂ ವೇತ್ತಿ ವಿಷ್ಣುಂ
ನೀಲಾನ್ ಮೇಘಾನ್ ವಿಲೋಕ್ಯ ಸ್ವಯಮಪಿ ಚ ಹರಿಃ ಕೃಷ್ಣ ಇತ್ಯುತ್ಸರನ್ತೀ।
ಸೇಯಂ ದೃಷ್ಟ್ವಾ ಪಶೂನಾಂ ನಿವಹಮಪಿ ಸ ಆಗಚ್ಛತೀತ್ಯೇವ ಗಚ್ಛೇ-
ದೇವಂ ಬಾಲಾ ಮಮೇಯಂ ಸಪದಿ ಬಹುತಮಾಂ ಮಾಯಿನಾ
ಮೋಹಿತಾಽಸ್ತಿ ॥

ತಾ|| (ಶ್ಲಾಘ್ಯೆಯಾದ ಈ ನನ್ನ ಕನ್ಯೆಯನ್ನು ಅವನು ಸನ್ಮಾಪಪಡಿಸಿ ಮುಗ್ಧೆಯಾಗುವಂತೆ ಮಾಡಿದಾನೆಂದು ಹೇಳುತ್ತಾಳೆ.) ಸನ್ಯಾಸಿಗಳನ್ನು ಕಂಡರೆ ಇವಳು ಜಗದ್ರಕ್ಷಕನಾದ ಸ್ವಾಮಿಯೇ ಎನ್ನುತ್ತಾಳೆ. ನೀಲಮೇಘಗಳನ್ನು ಕಂಡರೆ ಶ್ರೀಕೃಷ್ಣನು—ಎಂದು ಮೇಲಕ್ಕೆ ಹಾರುತ್ತಿರುವಳು. ದೊಡ್ಡ ಪಶುಗಳ ಗುಂಪನ್ನು ನೋಡಿ ಅವನು ಇಲ್ಲಿ ಬಂದಿರಬಹುದೆಂದು ಅವುಗಳ ಹಿಂದೆ ಹೋಗುತ್ತಿರುವಳು. ಈ ಪ್ರಕಾರ (ಅತ್ಯಂತ ದುರ್ಲಭೆಯಾಗಿ ಶ್ಲಾಘ್ಯೆಯಾದ) ಈ ನನ್ನ ಮಗಳನ್ನು ಭ್ರಾನ್ತೆಯಾಗುವಂತೆ ಅವನು ಮೋಹಪಡಿಸಿ ಇರುತ್ತಾನೆ.

(೧೦) ಅಯರ್‌ಕ್ಕುಮ್ ಶುಱ್ಱುಮ್‌ಪಱ್ಱಿ ನೋಕ್ಕುಮ್
ಅಕಲವೇ ನೀಳ್‌ನೋಕ್ಕುಕ್ಕೊಳ್ಳುಮ್
ವಿಯರ್‌ಕ್ಕುಮ್ ಮಳೈಕ್ಕಣ್‌ತುಳುಮ್ಬ, ವೆವ್ವುಯಿರ್-
ಕ್ಕೊಳ್ಳುಮ್ ಮೆಯ್‌ಶೋರುಮ್
ಪೆಯರ್‌ತ್ತುಮ್ ಕಣ್ಣಾವೆನ್ರು ಪೇಶುಮ್ ಪೆರುಮಾನೇ
ವಾವೆನ್ರು ಕೂವುಮ್,
ಮಯಱ್ಪೆರುಮ್ ಕಾದಲೆನ್ ಪೇದೈಕ್ಕೆನ್ ಶೆಯ್‌ಕೇನ್
ವಲ್ವಿನೈಯೇನೇ.

ಪ್ರ|| ಅಯರ್‌ಕ್ಕುಮ್ - (ಅವನನ್ನೇ ನೆನೆದು) ಮೋಹಿತೆಯಾಗುವಳು, ಶುಱ್ಱುಮ್-ಸುತ್ತಲೂ, ಪಱ್ಱಿ ನೋಕ್ಕುಮ್-ಅನೇಕಾವೃತ್ತಿ ನೋಡುತ್ತಿರುವಳು, ಅಕಲವೇ – (ದೂರ ಹೋಗಿಬಿಟ್ಟನೆಂದು ಭಾವಿಸಿ) ಕಣ್ಣಿನಿಂದ ದೂರದೃಷ್ಟಿಯಂ ಹೊಂದಿ, ನೀಳ್‌ನೋಕ್ಕುಕ್ಕೊಳ್ಳುಮ್-ಬಹುಕಾಲ ನೋಡುತ್ತಿರುವಳು. ವಿಯರ್‌ಕ್ಕುಮ್ – ಬೆವರುಹುಟ್ಟಿ ನೀರುನೀರಾಗಿರುವಳು, ಮೞೈ-ಮಳೆಯುಹಾಗೆ, ಕಣ್‌ತುಳುಮ್ಬ-ಕಣ್ಣುನೀರು ತುಂಬಿ ತುಳುಕುತ್ತಿರುವಲ್ಲಿ, ವೆಮ್ ಉಯಿರ್‌ಕೊಳ್ಳುಮ್-ಉಷ್ಣವಾದ ದೀರ್ಘಶ್ವಾಸವನ್ನು ಬಿಡುವಳು; ಮೆಯ್‌ಶೋರುಮ್ – ಶರೀರವು ಸೋತುಬೀಳುವುದು. ಪೆಯರ್‌ತ್ತುಮ್-ಮತ್ತೂ ಬಿಡದಂತೆ, ಕಣ್ಣಾ-ಕೃಷ್ಣನೇ, ಎನ್ರು ಪೇಶುಮ್-ಎಂದು ಸಂಬೋಧಿಸುವಳು. ಪೆರುಮಾನೇ-ನಾಥನೇ, ವಾ-ಬಾ, ಎನ್ರು-ಎಂದು, ಕೂವುಮ್ – ಕರೆಯುವಳು, ಮಯಲ್-ಹೀಗೆ ಹುಚ್ಚು ಹಿಡಿಯುವಂತೆ, ಪೆರುಮ್‌ಕಾದಲ್-ಅತ್ಯಾಶೆಯುಳ್ಳ, ಎನ್‌ಪೇದೈಕ್ಕು-ನನ್ನ (ಮಾತನ್ನು ಕೇಳದೆ ಇರುವ) ಈ ಹೆಣ್ಣಿಗೆ, ವಲ್ವಿನೈಯೇನ್-ಪ್ರಬಲಪಾಪವುಳ್ಳ ನಾನು, ಎನ್‌ಶೆಯ್‌ಕೇನ್-ಏನು ಮಾಡಬಲ್ಲೆನು ?

( ಸ-ಗಾ-ರ || )—

ಮುಗ್ಧಾ ಸಾದೃಶ್ಯದೃಷ್ಟ್ಯಾ! ಪರಿತ ಇಹ ತಮೇವಾನುಚಿನ್ತ್ಯಾಪ್ಯಪಶ್ಯೇ-
ದ್ದೂರಾದಾಗಚ್ಛತೀತ್ಯಪ್ಯಹಹ! ನನು ಭವೇತ್ ಸ್ವೇದತಶ್ಚ ದ್ರುತಾಂಗೀ|
ಉಚ್ಚ್ವಾಸೈಶ್ಚಾಶ್ರುನೇತ್ರಾ ಭವತಿ ಚ ನಿತರಾಂ ಸೀದತೀವಾಹ್ವಯೇತ್ತಂ
ಹೇ! ಕೃಷ್ಣೇತಿ ಬ್ರುವನ್ತೀ ಮದವಶಹೃದಯಾ ಮತ್ಸುತಾ! ಕಿನ್ನು
ಕುರ್ಯಾಮ್ ? ||

ತಾ|| (ಇವಳಿಗೆ ಈ ಭ್ರಮವು ಅತ್ಯುತ್ಕಟವಾಗಿದೆಯೆಂದು ಇವಳ ದುರ್ದಶೆಯನ್ನು ವರ್ಣಿಸುತ್ತಾಳೆ.) ಅವನನ್ನೇ ನೆನೆದು ಮೋಹಿತೆಯಾಗುತ್ತಾಳೆ. ಸುತ್ತಲೂ ನೋಡಿ ನೋಡಿ ಶ್ರಾನ್ತೆಯಾಗುತ್ತಾಳೆ. ದೂರ ಹೋಗಿದಾನೆಂದು ಬಹುದೂರ ನೋಡಿ ನೋಡಿ ಬಳಲುತ್ತಿದಾಳೆ. ಸನ್ತಾಪದಿಂದ ಬೆವರುಹುಟ್ಟಿ ನೀರುನೀರಾಗುತ್ತಾಳೆ. ಮಳೆ ಸುರಿಯುವಂತೆ ಕಣ್ಣುನೀರು ತುಳುಕಿಬಂದಾಗ್ಯೂ ಸನ್ತಾಪದಿಂದ ಬೆಂದು ದೀರ್ಘೋಚ್ಛ್ವಾಸವುಳ್ಳವಳಾಗುತ್ತಾಳೆ. ಶರೀರವು ಸೋತುಬೀಳುತ್ತಿದೆ. ಆದಾಗ್ಯೂ, "ಕೃಷ್ಣ!" ಎಂದು ಸಂಬೋಧಿಸುತ್ತಾಳೆ. "ನನ್ನ ಸ್ವಾಮಿಯೇ! ಬಾ" ಎಂದು ಕರೆಯುತ್ತಾಳೆ. ಈ ಪ್ರಕಾರ ಹುಚ್ಚುಹಿಡಿಯುವಂತೆ ಅತ್ಯಾಶೆಯುಳ್ಳ ಈ ಹೆಣ್ಣಿಗೆ ಪಾಪಿನಿಯಾದ ನಾನೇನು ಮಾಡಬಲ್ಲೆನು ?

(೧೧) ವಲ್ವಿನೈತೀರ್ಕ್ಕುಮ್ ಕಣ್ಣನೈ ವಣ್ಕುರುಕೂರ್
ಚ್ಚಡಕೋಪನ್,
ಶೊಲ್ವಿನೈಯಾಲ್ ಶೊನ್ನ ಪಾಡಲಾಯಿರತ್ತುಳ್ಳಿವೈ
ಪತ್ತುಮ್,
ನಲ್ವಿನೈಯೆನ್ರು ಕಟ್ಪಾರ್ಕಳ್ ನಲನುಡೈ ವೈಕುನ್ದಮ್
ನಣ್ಣಿಲ್,
ತೊಲ್ವಿನೈತೀರ ವೆಲ್ಲಾರುಮ್ ತೊಝುದೆೞ ವೀಱ್ಱಿರುಪ್ಪಾರೇ

ಪ್ರ|| ವಲ್ವಿನೈತೀರ್ಕ್ಕುಮ್-ಪ್ರಬಲವಾದ ಪಾಪಗಳನ್ನೆಲ್ಲಾ ನಾಶಪಡಿಸುವ, ಕಣ್ಣನೈ-ಕೃಷ್ಣನನ್ನು (ಸ್ತೋತ್ರಮಾಡುವುದಕ್ಕೆ), ವಣ್-ಸರ್ವಸಮ್ಪತ್ಸಮೃದ್ಧವಾದ, ಕುರುಕೂರ್-ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್-ನಮ್ಮಾಳ್ವಾರ್ರು, ಶೊಲ್ವಿನೈಯಾಲ್-ವಾಚಿಕ ಕೈಂಕರ್ಯರೂಪದಿಂದ, ಶೊನ್ನ - ರಚಿಸಿದ (ಹೇಳಿದ), ಪಾಡಲ್-ಗಾನರೂಪವಾದ ಪದ್ಯಗಳಾದ, ಆಯಿರತ್ತುಳ್-ಸಹಸ್ರದೊಳು, ಇವೈಪತ್ತುಮ್-ಈ ಹತ್ತುಪದ್ಯಗಳನ್ನು, ನಲ್ವಿನೈಯೆನ್ರು-ವಿಲಕ್ಷಣವಾದ ಕಾರ್ಯ

ವೆಂದು ತಿಳಿದು, ಕಱ್ಪಾರ್‌ಕಳ್-ಕಲಿಯುವವರು, ನಲನುಡೈ – ಭಗವದನುಭವಾನನ್ದವುಳ್ಳ ವೈಕುನ್ದಮ್-ಪರಮಪದವನ್ನು, ನಣ್ಣಿ-ಹೊಂದಿ (ಸವಿಾಪಿಸಿ), ತೊಲ್ವಿನೈತೀರ–ಅನಾದಿಸಿದ್ಧವಾದ ಅವಿದ್ಯಾದಿದೋಷಗಳು ನಿಶ್ಶೇಷವಾಗಿ ನಷ್ಟವಾದ ಮೇಲೆ, ಎಲ್ಲಾರುಮ್ ತೊೞುದು ಎೞ-ನಿತ್ಯಸೂರಿಗಳೆಲ್ಲರೂ ಆದರದೊಡನೆ ಇವರಿಗೋಸ್ಕರ ಎದ್ದುನಿಲ್ಲುವಂತೆ, ವೀಱ್ಱು ಇರುಪ್ಪಾರ್–(ಆ ಪರಮಪದದಲ್ಲಿ) ತಮ್ಮ ಸಾಮ್ರಾಜ್ಯವು ತೋರುವಂತೆ ಪ್ರಸಿದ್ಧರಾಗಿ ಬಾಳುವರು.

( ಸ–ಗಾ–ರ ॥ )—

ಪಾಪಧ್ವಂಸಂ ಶಠಾರಿರ್ಮುನಿರಯಮನಘಸ್ತೋತುಮೇವಾತ್ರ ಕೃಷ್ಣಂ
ಸೂಕ್ತೀಸ್ಸಾಹಸ್ರಸಂಖ್ಯಾ ಅವದದಿಹ ಶುಭಂ ಯೇ ಪಠನ್ತ್ಯೇವ ತತ್ರ ।
ದಿವ್ಯಾನೀಮಾನಿ ಪದ್ಯಾನ್ಯಪಿ ದಶ ಕಿಲ ತೇ ದಿವ್ಯವೈಕುಣ್ಠಮೇತ್ಯ
ಪ್ರಧ್ವಸ್ತಾಶೇಷಪಾಪಾ ಗುರುವರವಿನುತಾ ಯಾನ್ತಿ ಸಾಮ್ರಾಜ್ಯಸಿದ್ಧಿಮ್॥

ತಾ॥ (ಈ ದಶಕವನ್ನು ಬಲ್ಲವರು ಪರಮಪದದಲ್ಲಿ ನಿತ್ಯಸೂರಿಗಳಿಂದಲೂ ಸಂಭಾವಿಸಲ್ಪಡುವರೆಂದು ಹೇಳುತ್ತಾರೆ.) ಮಹಾಪಾಪಗಳನ್ನೆಲ್ಲಾ ನಾಶಪಡಿಸುವ ಶ್ರೀಕೃಷ್ಣನನ್ನು ಸ್ತೋತ್ರಮಾಡುವುದಕ್ಕಾಗಿ ಶ್ರೀ ಕುರುಕಾಪುರೀಶ್ವರರಾದ ನಮ್ಮಾೞ್ವಾರ್‌ರಿಂದ ರಚಿಸಲ್ಪಟ್ಟ ಗಾನರೂಪವಾದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಕಲಿಯುವವರು ಪರಮಾನನ್ದ ಜನಕವಾದ ಪರಮಪದವನ್ನು ಸೇರಿ, ಸಕಲ ದೋಷವಿನಿರ್ಮುಕ್ತರಾಗಿ ದಿವ್ಯಸೂರಿಗಳಿಂದಲೂ ಅಭಿನಂದಿಸಲ್ಪಟ್ಟು ಸರ್ವ ಸಾಮ್ರಾಜ್ಯದೊಡನೆ ಅಲ್ಲಿ ಪ್ರಸಿದ್ಧರಾಗಿ ಬಾಳುವರು.

( ದ್ರ–ಉ–ಸಂ ॥ )—

ತೇನ ಪ್ರಹರ್ಷಮತಿಮಾತ್ರಭವಂ ಸ್ವಕೀಯಂ
ಸಾತ್ಮ್ಯಂ ವಿಧಾತುಮಥ ದೂರಗತೇ ಮುಕುನ್ದೇ ।
ಸಮ್ಬನ್ಧಿನಶ್ಚ ಸದೃಶಾಂಶ್ಚ ವಿಲೋಕ್ಯ ಶೌರೇ–
ರ್ಭ್ರಾಮ್ಯಂಸ್ತಮೇವ ಮುನಿರಾರ್ತಿಮಗಾಚ್ಚತುರ್ಥೇ ॥

( ದ್ರ–ಉ–ತಾ–ರ ॥ )—

ಭೂಮ್ಯಾದ್ಯೈಸ್ಸಾಗರಾದ್ಯೈರ್ಜ್ವಲನಶಶಿಮುಖೈರ್ವಸ್ತುಭಿರ್ವತ್ಸಪೂರ್ವೈ
ರ್ನೃತ್ಯದ್ಭಿಸ್ಸೈವೃಶ್ಚ ಲೋಕಾದಿಭಿರಥ ಪೃಥಿವೀಕ್ಷ್ಮಿದ್ಭಿರಾತ್ಮೀಯದಾಸ್ಯೈಃ ।
ಸೌಲಭ್ಯೈಶ್ವರ್ಯವರ್ಗೈರಪಿ ಚ ಗುಣಗಣೈರ್ವಾಸುದೇವೋ ವಿಯೋಗೇ
ಸ್ವೀಯೈಸ್ತುಲ್ಯೈಶ್ಚ ಭಕ್ತಾನ್ ವ್ಯಥಯತಿ ಮಧುಹೇತ್ಯಬ್ರವೀತ್ಕಾರಿಸೂನುಃ॥

(ಈ ಚತುರ್ಥದಶಕದ್ದ ಸಾರಾಂಶ)—

ಈ ನಾಲ್ಕನೆಯದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ಅವನ ಪ್ರಣಯಾತಿಶಯವನ್ನು ಕೊಂಡಾಡಿ ಸನ್ತುಷ್ಟೆಯಾಗಿರಲು ಅವನು ದೂರಹೋದಮೇಲೆ ವಿಶ್ಲೇಶಷವನ್ನು ಸಹಿಸಲಾರದೆ ಹುಚ್ಚುಹಿಡಿದಂತೆ ಭ್ರಾನ್ತೆಯಾಗಿ ಈನಾಯಕಿಯು ತತ್ಸಂಬನ್ಧಿ ವಸ್ತುಗಳನ್ನೂ ಸದೃಶವಸ್ತುಗಳನ್ನೂ ನೋಡಿ (ಭೂಮಿ-ಅಂತರಿಕ್ಷ-ಸಮುದ್ರ-ಸೂರ್ಯ-ಅಗ್ನಿ-ವಾಯು-ಚಂದ್ರ-ಪರ್ವತ- ಮೇಘ-ವತ್ಸ-ಸರ್ಪ- ಕುಂಭನೃತ್ತ-ವೇಣುಗಾನ-ನವನೀತ- ಭಸ್ಮರೇಖಾ-ತುಳಸೀ – ರಾಜವರ್ಗ-ವಿಗ್ರಹ-ಸನ್ನ್ಯಾಸಿ – ಪಶುಸಂಘ – ಇತ್ಯಾದಿಗಳನ್ನು ನೋಡಿ) ಹೇಳುವ ಮಾತುಗಳನ್ನೂ, ಮಾಡುವ ಚೇಷ್ಟೆಗಳನ್ನೂ ತಾಯಿಯು ವರ್ಣಿಸುವುದಾಗಿ ಅನುವಾದಮಾಡಿರುತ್ತಾರೆ.

ಶ್ರೀಃ

# ಚತುರ್ಥಶತಕದಲ್ಲಿ—ಪಂಚಮದಶಕ.

(ವೀಱ್ಱಿರುನ್ದು—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಮೋಹಶಾನ್ತಿಯಂಪಡೆದು ನಿತ್ಯಸೂರಿ ಸಹಿತನಾದ ಸರ್ವೇಶ್ವರನಿಗೆ ಮಂಗಳಾಶಾಸನವಂ ಮಾಡುತ್ತಾರೆ.)

---

(೧) ವೀಱ್ಱಿರುನ್ದೇೞುಲಕುಮ್ ತನಿಕ್ಕೋಲ್ ಶೆಲ್ಲ ವೀವಿಲ್ ಶೀರ್,
ಆಱ್ಱಲ್ ಮಿಕ್ಕಾಳುಮಮ್ಮಾನೈ ವೆಮ್ಮಾ ಪಿಳನ್ದಾ ತನ್ನೈ,
ಪೋಱ್ಱಿಯೆನ್ಱೇ ಕೈಕಳಾರ ತ್ತೊೞುದು ಶೊಲ್ಮಾಲೈಕಳ್,
ಏಱ್ಱ ನೋಱ್ಱೇಕ್ಕಿನಿ ಯೆನ್ನಕುಱೈ ಯೆೞುಮೈಯುಮೇ.

ಪ್ರ|| ವೀಱ್ಱು–ಇತರ ವ್ಯಾವೃತ್ತನಾಗಿ, ಇರುನ್ದು–(ಪರಮಪದದಲ್ಲಿ) ದಿವ್ಯ ಸಿಂಹಾಸನದಲ್ಲಿ ಇದ್ದು, ಏೞುಲಕುಮ್–ಸಕಲಲೋಕಗಳಲ್ಲೂ, ತನಿ–ಅದ್ವಿತೀಯವಾದ, ಕೋಲ್–ಸಾಮ್ರಾಜ್ಯವು (ದಂಡಧಾರಿತ್ವಾಧಿಕಾರವು), ಶೆಲ್ಲ- ನಡೆಯುವಂತೆ, ವೀವಿಲ್ – ಅಪ್ರತಿಹತವಾದ, ಶೀರ್ – ಕಲ್ಯಾಣಗುಣಗಳಿಂದ ಕೂಡಿದವನಾಗಿ,

ಆಱ್ಱಲ್‌ಮಿಕ್ಕು–ನಿರವಧಿಕವಾದ ಶಾನ್ತಿಗುಣದಿಂದ, ಆಳುಮ್ – ಆಳುತ್ತಿರುವ, ಅಮ್ಮಾನ್ನೈ – ಸರ್ವಸ್ವಾಮಿಯಾದವನನ್ನು, ವೆಮ್‌-ಅತಿಕ್ರೂರವಾದ, ಮಾ-ಕೇಶಿ ಯೆಂಬ ಕುದುರೆಯನ್ನು, ಪಿಳನ್ದಾನೈ–ಸೀಳಿದ ಸರ್ವೇಶ್ವರನನ್ನು, ಪೋಱ್ಱಿ ಎನ್ಱೇ-(ಸ್ವಸ್ತಿ–ಎಂದು) ಮಂಗಳಾಶಾಸನವಂಮಾಡಿ ಕೊಣ್ಡೇ, ಕೈಕಳ್-ಹಸ್ತಗಳು, ಆರ–ಕೃತಾರ್ಥವಾಗುವಂತೆ (ಪೂರ್ಣವಾಗಿ), ತೊೞುದು- ಅಂಜಲಿಬನ್ಧವಂಮಾಡಿ, ಶೊಲ್ಮಾಲೈಕಳ್–ಸೂಕ್ತಿಮಾಲೆಗಳನ್ನು, ಏಱ್ಱ-ಸಮರ್ಪಿಸುವುದಕ್ಕೆ, ನೋಱ್ಱೇಱ್ಕು –ಭಾಗ್ಯವುಳ್ಳ ನನಗೆ, ಇನಿ-ಇನ್ನುಮೇಲೆ, ಏೞುಮೈಯುಮ್-ಏಳೇಳು ಜನ್ಮಗಳಲ್ಲೂ, ಎನ್ನಕುಱೈ–ಏನು ಕೊರತೆಯುಂಟಾಗುವುದು ?

( ಸ–ಗಾ–ರ || )—

ದಿವ್ಯಾಸ್ಥಾನಪದಸ್ಥಿತೋಽಪಿ ಭುವನಾನ್ಯೇತಾನಿ ಸರ್ವಾಣ್ಯಪಿ ಯ–
ಸ್ಸ್ವಾಮೀ ಶಾಸ್ತಿ ನಿರಙ್ಕುಶಶ್ಚ ಸುಗುಣೈಶ್ಶಾನ್ತ್ಯಾ ಚ ದುರ್ವಾಜಿಹಾ |
ತಂ ಸ್ವಸ್ತೀತಿ ಪುನಃ ಪುನಶ್ಚ ಕರತೋ ಬದ್ಧ್ವಾಞ್ಜಲಿಂ ಸ್ತೋತ್ರತ–
ಶ್ಚಾನನ್ದ್ಯಾಸ್ಮಿ ಕೃತೀ ! ನ ಸಪ್ತಜನಿಷು ಕ್ವಾಪ್ಯಸ್ತಿ ಹಾನಿಸ್ತು ಮೇ ||

ತಾ|| (ಸರ್ವೇಶ್ವರನಾಗಿದ್ದು ಆಶ್ರಿತರಕ್ಷಣಕ್ಕೋಸ್ಕರ ಅವತಾರಮಾಡಿದ ಸ್ವಾಮಿಗೆ ಮಂಗಳಾಶಾಸನಮಾಡುವ ಭಾಗ್ಯವುಳ್ಳ ನನಗೆ ಎಂದಿಗೂ ಕೊರತೆಯಿಲ್ಲ ವೆಂದು ಹೇಳುತ್ತಾರೆ.) ಪರಮಪದದಲ್ಲಿ ದಿವ್ಯಸಿಂಹಾಸನದಲ್ಲಿದ್ದು ಸರ್ವಲೋಕ ಸಾಮ್ರಾಜ್ಯವಂ ನಡೆಸುತ್ತ ಸಕಲ ಕಲ್ಯಾಣಗುಣಭರಿತನಾಗಿ ನಿರವಧಿಕ ಶಾನ್ತಿ ಯೊಡನೆ ಆಳುತ್ತ ಕೇಶಿಯೆಂಬ ಅಸುರನನ್ನು ಧ್ವಂಸಮಾಡಿದ ಸ್ವಾಮಿಗೆ ಮಂಗಳಾ ಶಾಸನವಂ ಮಾಡಿ ಸಾಂಜಲಿಹಸ್ತನಾಗಿ ಸೇವಿಸುತ್ತ ಸೂಕ್ತಿಮಾಲೆಗಳಂ ಸಮರ್ಪಿ ಸುವ ಭಾಗ್ಯವುಳ್ಳ ನನಗೆ ಎಂದಿಗೂ ಯಾವ ಕೊರತೆಯೂ ಉಂಟಾಗಲಾರದು.

(೨) ಮೈಯ್ಯಕಣ್ಣಾಳ್ ಮಲರ್‌ಮೇಲುಱೈವಾಳುಱೈ ಮಾರ್ಪಿನನ್,
ಶೆಯ್ಯಕೋಲತ್ತಡಙ್ಕಣ್ಣನ್ ವಿಣ್ಣೋರ್ ಪೆರುಮಾನ್ತನ್ನೈ
ಮೊಯ್ಯಶೊಲ್ಲಾಲಿಶೈ ಮಾಲೈಕಳೇತ್ತಿ ಉಳ್ಳಪ್ಪೆಱ್ಱೇನ್,
ವೆಯ್ಯನೋಯ್‌ಕಳ್ ಮುೞುದುಮ್ ವಿಯಲ್ ಞಾಲತ್ತು
ನೀಯುಮೇ.

ಪ್ರ|| ಮೈಯಕಣ್ಣಾಳ್–(ಅಸಿತೇಕ್ಷಣೆಯಾದುದರಿಂದ) ಅಂಜನ ಹಚ್ಚಿದಂತೆ ಕಣ್ಣುಗಳುಳ್ಳವಳಾಗಿಯೂ, ಮಲರ್‌ಮೇಲುಱೈವಾಳ್–ತಾವರೆಹೂವಿನಲ್ಲಿ ವಾಸ

ಮಾಡುವುದರಿಂದ ಪರಿಮಳಭರಿತವಾದ ಶರೀರವುಳ್ಳವಳಾಗಿಯೂ ಇರುವ ಲಕ್ಷ್ಮೀ ದೇವಿಯು, ಉತ್ತೈ-ನಿತ್ಯವಾಸಮಾಡುವ, ಮಾರ್ಪಿನ್ನೆ-ವಕ್ಷಸ್ಸ್ಥಲವುಳ್ಳವನಾಗಿ, ಶೆಯ್ಯ-ಕೆಂಪಾದ, ಕೋಲ-ರಮ್ಯವಾದ, ತಡಮ್‌ಕಣ್ಣ-ವಿಶಾಲವಾದ ನೇತ್ರಗಳುಳ್ಳ, ವಿಣ್ಣೋರ್‌ಪೆರುಮಾನೈ ತನ್ನೈ-ನಿತ್ಯಸೂರಿಗಳಿಗೆ ಸ್ವಾಮಿಯಾದವನನ್ನು, ಮೊಯ್ಯಶೊಲ್ಲಾಲ್-(ಸಾಮಗಾನದಂತೆ) ಸೇರಿಕೊಂಡಿರುವ ಸೂಕ್ತಿಗಳಿಂದಕೂಡಿದ, ಇಶ್ಶೈಮಾಲೈಕಳ್-ಗೀತರೂಪವಾದ ಮಾಲೆಗಳಿಂದ, ವಿಯಲ್-ವಿಸ್ತೀರ್ಣವಾದ, ಞಾಲತ್ತು-ಈ ಜಗತ್ತಿನಲ್ಲಿರುವಾಗಲೇ, ವೆಯ್ಯ-ಸನ್ತಾಪಜನಕವಾದ, ನೋಯ್‌ಕಳ್-ಕ್ಲೇಶಗಳು, ಮುಱ್ಱುದುಮ್-ಎಲ್ಲಾ, ವೀಯ-ನಾಶಹೊಂದುವಂತೆ, ಏತ್ತಿ-ಸ್ತೋತ್ರಮಾಡಿ, ಉಳ್ಳ ಪ್ಪೆಱ್ಱೇ-(ಅವನ ಮುಖೋಲ್ಲಾಸವನ್ನು) ನನ್ನ ಮನಸ್ಸಿನಿಂದ ಅನುಭವಿಸುವ ಭಾಗ್ಯವುಳ್ಳವನಾಗಿದೇನೆ.

( ಸ-ಗಾ-ರ || )—

**ಧತ್ತೇ ಯಸ್ತ್ವಸಿತೇಕ್ಷಣಾಮುರಸಿ ತಾಂ ಪದ್ಮಾಲಯಾಂ ಶ್ರೀಧರಂ**
**ತಂ ರಕ್ತಾಮ್ಬುಜಲೋಚನಂ ಮಮ ಕವೇಃ ಪದ್ಯೈಸ್ತು ಹೃದ್ಯೈರಹಮ್ |**
**ಸೂರೀಣಾಮಧಿದೇವಮಚ್ಯುತಮಹೋ ! ಸ್ತುತ್ವಾ ಕೃತೀ ಭೂತಲೇ**
**ಸರ್ವಕ್ಲೇಶವಿನಾಶಕೋಽಸ್ಮಿ ಚ ಹರೇರ್ವಿಷ್ಣೋರ್ಮುಖೋಲ್ಲಾಸತಃ ||**

ತಾ|| (ಅವನ ಮಾಹಾತ್ಮ್ಯಕ್ಕೆ ಕಾರಣಭೂತವಾದ ಲಕ್ಷ್ಮೀಪತಿತ್ವವನ್ನು ಅನುಸನ್ಧಾನಮಾಡಿ, ಸರ್ವಕ್ಲೇಶ ವಿನಾಶವಾಗುವಂತೆ ಅವನನ್ನು ಸ್ತೋತ್ರ ಮಾಡುವಭಾಗ್ಯವು ನನಗೆ ಇದೆಯೆಂದು ಸನ್ತುಷ್ಟರಾಗುತ್ತಾರೆ.) ಅಸಿತೇಕ್ಷಣೆಯಾಗಿಯೂ ಪದ್ಮವಾಸಿನಿಯಾಗಿಯೂ ಇರುವ ಲಕ್ಷ್ಮೀದೇವಿಯನ್ನು ವಕ್ಷಸ್ಸ್ಥಲದಲ್ಲಿ ನಿತ್ಯವಾಗಿ ಧರಿಸಿರುವ ಪದ್ಮನೇತ್ರನಾದ ನಿತ್ಯಸೂರೀಶ್ವರನನ್ನು (ನಾನು ಸಕಲ ಕ್ಲೇಶವಿನಾಶವಾಗುವಂತೆ) ದಿವ್ಯಸೂಕ್ತಿಮಾಲೆಗಳಿಂದ ಗಾನಮಾಡಿ ಸ್ತುತಿಸಿ ಅವನ ಮುಖೋಲ್ಲಾಸವಂ ಪಡೆಯುವ ಭಾಗ್ಯವುಳ್ಳವನಾಗಿದೇನೆ.

(೩) ವೀವಿಲಿನ್ಬ ಮಿಕವೆಲ್ಲೈ ನಿಕಳ್‌ನ್ದ ನಮ್ಮಚ್ಚುತನ್,
ವೀವಿಲ್‌ಶೀರನ್ ಮಲರ್‌ಕ್ಕಣ್ಣನ್ ವಿಣ್ಣೋರ್
ಪೆರುಮಾನ್‌ತನ್ನೈ,
ವೀವಿಲ್ ಕಾಲಮಿಶ್ಶೈ ಮಾಲೈಕಳೇತ್ತಿ ಮೇವ ಪ್ಪೆಱ್ಱೇನ್,
ವೀವಿಲಿನ್ಬಮಿಕವೆಲ್ಲೈ ನಿಕಳ್‌ನ್ದ ನನ್ಮೇವಿಯೇ.

ಪ್ರ॥ ವೀವು ಇಲ್ ಇನ್ಬಮ್ – ಅವಿಚ್ಛಿನ್ನವಾದ ಆನನ್ದವು, ಮಿಕ ಎಲ್ಲೈ ನಿಕಳ್ನ್ದ–ಸೀಮಾತೀತವಾಗಿ ಬೆಳೆಯುತ್ತಿರುವ ಸ್ವಭಾವವುಳ್ಳ, ನಮ್ ಅಚ್ಚುತ್ತರ್– ನಮ್ಮನ್ನು ಕೈಬಿಡದೆ ರಕ್ಷಿಸುವ ಅಚ್ಯುತನಾಗಿಯೂ, ವೀವು ಇಲ್ ಶೀರ್ರ – ಅನ್ತ ವಿಲ್ಲದ ನಿತ್ಯಯೌವನಾದಿಗುಣಗಣವಿಶಿಷ್ಟನಾಗಿಯೂ, ಮಲರ್ಕಣ್ಣ – ಪುಂಡರೀ ಕಾಕ್ಷನಾಗಿಯೂ (ಇರುವ), ವಿಣ್ಣೋರ್ ಪೆರುಮಾ ತನ್ನೈ–ನಿತ್ಯಸೂರೀಶ್ವರನನ್ನು, ವೀವು ಇಲ್–ಅವಿಚ್ಛಿನ್ನವಾದ, ಕಾಲಮ್–ಎಲ್ಲಾ ಕಾಲದಲ್ಲೂ, ಇಶೈ ಮಾಲೈಕಳ್ -ಗಾನರೂಪವಾದ ಪದ್ಯಮಾಲೆಗಳಿಂದ, ಏತ್ತಿ–ಸ್ತುತಿಸಿ, ಮೇವ ಪ್ಪೆಱ್ಱೇ–ಆಶ್ರಯಿ ಸಿದೆನು. ಮೇವಿ–ಆಶ್ರಯಿಸಿ, ವೀವು ಇಲ್–ಅನ್ತವಿಲ್ಲದ, ಇನ್ಬಮ್–ಆನನ್ದದ, ಮಿಕ ಎಲ್ಲೈ – ಅಪರಿಚ್ಛೇದ್ಯವಾದ ಅಭಿವೃದ್ಧಿಗಳು, ನಿಕಳ್ನ್ದನ–ಉಂಟಾದುವು. (ಅವನ ನಿರತಿಶಯಾನನ್ದಕ್ಕಿಂತ ನನ್ನ ಆನನ್ದವು ಅತ್ಯಧಿಕವಾಗಿದೆಯೆಂದು ಭಾವವು.)

( ಸ–ಗಾ–ರ ॥ )—

ನಿತ್ಯಾನನ್ದಸಮೃದ್ಧಮಚ್ಯುತಮಹೋ! ಮಾಹಾತ್ಮ್ಯಸೀಮಾತಿಗಂ
ಪದ್ಮಾಕ್ಷಂ ಸುರಬೃನ್ದಸೇವ್ಯಮನಿಶಂ ಸ್ತೋತುಂ ಚ ಗೀತೈರ್ಮಮ ।
ಮಾಲಾರೂಪಧರೈಸ್ತು ಪದ್ಯನಿಚಯೈರ್ಹೃದ್ಯೈರಹಂ ಭಾಗ್ಯವಾನ್ !
ಪ್ರಾಪ್ಯೈನಂ ಪರಮಾಂ ಸಮೃದ್ಧಿಮಭಜಂ ಹ್ಯಾನನ್ದಸಿನ್ಧೋರಹಮ್ ॥

ತಾ॥ (ಸಕಲಕಲ್ಯಾಣಗುಣವಿಶಿಷ್ಟನಾಗಿ ಉಭಯ ವಿಭೂತಿನಾಯಕನಾಗಿರುವ ಸ್ವಾಮಿಯನ್ನು ಸ್ತೋತ್ರಮಾಡುವುದರಿಂದ ನನಗೆ ಉಂಟಾದ ಆನನ್ದಾತಿಶಯವು ಅವನ ನಿರತಿಶಯಾನನ್ದಕ್ಕಿಂತ ಅತ್ಯಧಿಕವಾಗಿದೆಯೆಂದು ಹೇಳುತ್ತಾರೆ.) ನಿತ್ಯ ನಿಸ್ಸೀಮಾನನ್ದಮಯನಾದ ನಮ್ಮ ಅಚ್ಯುತನಾಗಿಯೂ, ಸಕಲ ಕಲ್ಯಾಣಗುಣ ವಿಶಿಷ್ಟನಾಗಿಯೂ, ಪುಂಡರೀಕಾಕ್ಷನಾಗಿಯೂ, ನಿತ್ಯಸೂರೀಶ್ವರನಾಗಿಯೂ ಇರುವ ಸ್ವಾಮಿಯನ್ನು ಸರ್ವಕಾಲದಲ್ಲೂ ಗಾನರೂಪವಾದ ಪದ್ಯಮಾಲೆಗಳಿಂದ ಸ್ತುತಿಸಿ ಆಶ್ರಯಿಸಿರುವ ಭಾಗ್ಯಶಾಲಿಯಾದ ನನ್ನ ಅಪರಿಚ್ಛಿನ್ನವಾದ ಆನನ್ದಪರಂಪರೆಗಳು ಅವನ ಆನನ್ದಕ್ಕಿಂತ ಅಧಿಕವಾಗಿ ಬೆಳೆಯುತ್ತಿವೆಯೆಂದು ತಾತ್ಪರ್ಯ.

(೪) ಮೇವಿನಿನ್ರು ತೊೞುವಾರ್ ವಿನೈಪೋಕ ಮೇವುಮ್ ಪಿರಾ,
ತೂವಿಯಮ್ ಪುಳ್ಳುಡೈಯೊನಡಲಾೞಿ ಯಮ್ಮಾ ತನ್ನೈ,
ನಾವಿಯಲಾಲಿಶೈಮಾಲೈಕಳೇತ್ತಿ ನಣ್ಣ ಪ್ಪೆಱ್ಱೇ,
ಆವಿಯೆನ್ನಾವಿಯೈ ಯಾನಱಿಯೇ ಶೆಯ್ದ

ವಾಱ್ಱೈಯೇ.

ಪ್ರ|| ಮೇವಿ-(ಅನನ್ಯಪ್ರಯೋಜನರಾಗಿ) ಕೂಡಿ, ನಿನ್ರು-ಸ್ಥಿರವಾಗಿ ನಿಂತು, ತೊಳುವಾರ್-ಸೇವಿಸುವವರ, ವಿನ್ಯೈ-ಪಾಪಗಳು, ಪೋಕ-(ತಾವಾಗಿಯೇ) ನಾಶ ಹೊಂದುವಂತೆ, ಮೇವುಮ್-ಅವರೊಡನೆ ತಾನು ಸಂಶ್ಲೇಷಿಸುವ ಸ್ವಭಾವವುಳ್ಳ, ಪಿರ್ಾ-ಮಹೋಪಕಾರಕನಾದ, ತೂವಿ- ಆಶ್ರಿತರ ಸಾನ್ನಿಧ್ಯವಂ ಹೊಂದಿಸುವ ಪಕ್ಷಪಾತವುಳ್ಳ, ಅಮ್-ರಮಣೀಯವಾದ, ಪುಳ್-ಗರುಡನನ್ನು, ಉಡ್ಯೈಯರ್ಾ-ವಾಹನವಾಗಿ ಉಳ್ಳ, ಅಡಲಾಳ್ಳಿ-ಯುದ್ಧೋನ್ಮುಖನಾದ ಸುದರ್ಶನನನ್ನು ಆಯುಧವಾಗಿ ಧರಿಸಿರುವ, ಅಮ್ಮಾರ್ತನ್ನೈ-ಸರ್ವೇಶ್ವರನನ್ನು, ನಾ ಇಯಲಾಲ್-ಜಿಹ್ವಾವೃತ್ತಿಯಿಂದ, ಇಶೈಮಾಲೈಕಳ್-ಗಾನಮಾಲೆಗಳಿಂದ, ಏತ್ತಿ-ಸ್ತುತಿಸಿ, ನಣ್ಣ-ಆಶ್ರಯಿಸುವ ಭಾಗ್ಯವನ್ನು, ಪೆಱ್ರೇ-ಪಡೆದೆನು. ಆವಿ-ನನಗೆ ಅನ್ತರಾತ್ಮನಾಗಿ ಧಾರಕನಾಗಿರುವವನು, ಎರ್ ಆವಿಯ್ಯೈ-ನನ್ನ ಆತ್ಮವಸ್ತುವನ್ನು, ಶೆಯ್‌ದ ಆಱ್ಱೈ-(ತನ್ನನ್ನು ಸ್ತುತಿಸುವಂತೆಯೂ ಆನನ್ದಪಡಿಸುವಂತೆಯೂ) ಮಾಡಿರುವ ಪ್ರಕಾರವನ್ನು, ನರ್ಾ ಅಱಿಯೇರ್-ನಾನು ನಿರ್ಣಯಿಸಿ ಈಪ್ರಕಾರವೆಂದು ತಿಳಿಯಲಾರೆನು.

( ಸ ಗಾ-ರ || )—

**ನಿತ್ಯಂ ಯೇ ದೃಢಭಕ್ತಿಯುಕ್ತಹೃದಯಾಸ್ತೇಷಾಂ ಸಮಸ್ತಾಘಹಂ**
**ಸಂಶ್ಲೇಷೇಣ ಚ ತಾರ್ಕ್ಷ್ಯವಾಹನಮಮುಂ ಶ್ರೀಚಕ್ರಪಾಣಿಂ ಹರಿಮ್ |**
**ವಾಚಾ ಗನ್ತುಮಹಂ ಕೃತೀ ವಿರಚಯನ್ಮೇ ಪದ್ಯಮಾಲಾಮಿಮಾಂ**
**ಕಿಂ ಕಿಂ ವಾಽದ್ಯ ಕರೋತಿ ಮಾಂ ಮಮ ವಿಭುಶ್ಯೈ್ರೇಶೋಽನ್ತರಾತ್ಮಾ ಸ್ವಯಮ್ ||**

ತಾ|| (ನಿತ್ಯಸೂರೀಶ್ವರನಾದ ಅವನು ನಿತ್ಯಸಂಸಾರಿಯಾದ ನನ್ನಲ್ಲಿ ಮಾಡಿದ ಮಹೋಪಕಾರವನ್ನು ನಾನು ಈಪ್ರಕಾರವಾದುದೆಂದು ನಿರ್ಣಯಿಸಲಾರೆನೆಂದು ಹೇಳುತ್ತಾರೆ.) ಅನನ್ಯಪ್ರಯೋಜನರಾಗಿ ಆಶ್ರಯಿಸುವ ಭಕ್ತರ ಪಾಪಗಳು ನಷ್ಟವಾಗುವಂತೆ ಅವರೊಡನೆ ಸಂಶ್ಲೇಷಿಸುವ ಸ್ವಭಾವವುಳ್ಳ ಗರುಡವಾಹನನಾದ ಚಕ್ರಪಾಣಿಯನ್ನು ನಾಲಿಗೆಯಿಂದ ಗಾನಮಾಡಿ ಸ್ತುತಿಸಿ ಆಶ್ರಯಿಸುವ ಭಾಗ್ಯವನ್ನು ನಾನು ಪಡೆದೆನು. ನನಗೆ ಅವನು ಅನ್ತರಾತ್ಮನಾಗಿ ಧಾರಕನಾಗಿದ್ದು (ಅವನನ್ನು ನಾನು ಸ್ತೋತ್ರಮಾಡಿ ಆನನ್ದಪಡಿಸುವಂತೆ) ಮಾಡಿರುವ ಮಹೋಪಕಾರವನ್ನು ಪರಿಚ್ಛೇದಿಸಿ ಈದೃಶವೆಂದು ನಾನು ತಿಳಿಯಲಾರೆನು.

(೫) ಆಱ್ಱ ನಲ್ಲವಕೈ ಕಾಟ್ಟುಮಮ್ಮಾನೈ, ಅಮರರ್ ತಮ್
ಏಱ್ಱೈ ಯೆಲ್ಲಾಪ್ಪೊರುಳುಮ್ ವಿರಿತ್ತಾನೈ
ಯೆಮ್ಮಾ[ ]ತನ್ನೈ,
ಮಾಱ್ಱ ಮಾಲೈಪುನೈನ್ದೇತ್ತಿ ನಾಳುಮ್
ಮಕಿೞ್ವೆಯ್‌ದಿನೇ[ ],
ಕಾಱ್ಱಿಲ್ ಮುನ್ನಮ್ ಕಡುಕಿ ವಿನೈನೋಯ್‌ಕಳ್
ಕರಿಯವೇ.

ಪ್ರ|| ಆಱ್ಱ-ಸಹಿಸುವಂತೆ (ನನ್ನ ಶಕ್ತಿಗೆ ತಕ್ಕಂತೆ), ನಲ್ಲ-ವಿಲಕ್ಷಣವಾದ, ವಕೈ-(ಪರಭಕ್ತಿ-ಪರಜ್ಞಾನ-ಪರಮಭಕ್ತಿಗಳೆಂಬ) ಪ್ರಕಾರಗಳನ್ನು, ಕಾಟ್ಟುಮ್-ಪ್ರಕಾಶಪಡಿಸುವ, ಅಮ್ಮಾನೈ-ನಿರುಪಾಧಿಕ ಸ್ವಾಮಿಯನ್ನು, ಅಮರರ್ ತಮ್-ನಿತ್ಯಸೂರಿಗಳು ಅನುಭವಿಸುವಂತೆ ನಮಗೆ ಅನುಭವವನ್ನುಂಟುಮಾಡುವ, ಏಱ್ಱೈ-ಮಾಹಾತ್ಮ್ಯವುಳ್ಳವನಾಗಿ, ಎಲ್ಲಾಪ್ಪೊರುಳುಮ್-(ಗೀತಾಶಾಸ್ತ್ರದ್ವಾರಾ) ಸಕಲ ವೇದಾನ್ತಾರ್ಥಗಳನ್ನೂ, ವಿರಿತ್ತಾನೈ-ಚೆನ್ನಾಗಿ ಉಪದೇಶಿಸಿದ, ಎಮ್ಮಾ[ ]ತನ್ನೈ-ನನಗೆ ನಿರ್ಹೇತುಕ ಮಹೋಪಕಾರಮಾಡಿದ ಸ್ವಾಮಿಯನ್ನು, ವಿನೈ-ಪಾಪಿಗಳೂ, ನೋಯ್‌ಕಳ್-ವ್ಯಾಧಿಗಳೂ, ಕಾಱ್ಱಿಲ್-(ಶೀಘ್ರಗಾಮಿಯಾದ) ವಾಯುವಿಗಿಂತ, ಮುನ್ನಮ್-ಮುಂಚೆಯೇ, ಕಡುಕಿ-ಪಲಾಯನ ಮಾಡಿ (ಓಡಿಹೋಗಿ), ಕರಿಯ-ದಗ್ಧವಾಗುವಂತೆ, ಮಾಱ್ಱಮ್‌ಮಾಲೈ-ಶಬ್ದರಚನಾರೂಪವಾದ ಮಾಲೆಗಳನ್ನು, ಪುನೈನ್ದು-ರಚಿಸಿ (ಪೋಣಿಸಿ), ಏತ್ತಿ-ಸ್ತೋತ್ರಮಾಡಿ, ನಾಳುಮ್-ಸರ್ವಕಾಲದಲ್ಲೂ, ಮಕಿೞ್ವು-ಆನನ್ದವನ್ನು, ಎಯ್‌ದಿನೇ[ ]-ಪಡೆದೆನು

( ಸ-ಗಾ-ರ || )—

ಸನ್ಮಾರ್ಗಾನ್ಮಮ ದರ್ಶಯನ್ತಮನಘಂ ದೇವಾಧಿದೇವಂ ಪ್ರಭುಂ
ದಿವ್ಯಾರ್ಥಾನ್ಮಮ ಬೋಧಯನ್ತಮಪಿ ತಂ ಗೀತಾಗುರುಂ ಶ್ರೀಧರಮ್ ।
ಪಾಪವ್ಯಾಧಿತತಿಪ್ರಶಾನ್ತಿವಿಧಯೇ ಮೇ ಪದ್ಯಮಾಲಾಮಿಮಾಂ
ಕೃತ್ವಾ ಸ್ತೌಮಿ ಹಿ ಸನ್ತತಂ ಚ! ಪರಮಾನನ್ದಂ ಭಜೇಽಹಂ ತತಃ ||

ತಾ|| (ತಾನು ಸರ್ವಸ್ಮಾತ್ಪರನಾಗಿದ್ದರೂ ಅರ್ಜುನನಿಗೆ ಸರ್ವ ವೇದಾನ್ತಾರ್ಥಗಳನ್ನೂ ಕ್ರಮೇಣ ಸ್ವಲ್ಪಸ್ವಲ್ಪವಾಗಿ ಅವನು ಗ್ರಹಿಸುವ ಹಾಗೆ ಉಪದೇಶಿಸಿದಂತೆ ನನಗೂ ತನ್ನ ಪ್ರಕಾರಗಳನ್ನೆಲ್ಲಾ ತೋರಿಸಿದುದರಿಂದ, ನಾನು ಅನುಭವಿಸಿ ನನ್ನ ಪಾಪವ್ಯಾಧಿಗಳೆಲ್ಲಾ ಹೋಗುವಂತೆ ಈ ತಿರುವಾಯ್ಮೊೞಿಯನ್ನು ರಚಿಸಿ

ಪರಮಾನನ್ದವಂ ಪಡೆದೆನೆಂದು ಹೇಳುತ್ತಾರೆ.) ನಿತ್ಯಸೂರೀಶ್ವರನಾಗಿ ವಿಲಕ್ಷಣ ವಾದ ಪರಭಕ್ತಿ-ಪರಜ್ಞಾನ-ಪರಮಭಕ್ತಿಗಳನ್ನು ನನಗೆ ಉಂಟುಮಾಡಿ, ಸಕಲ ವೇದಾನ್ತಾರ್ಥಗಳನ್ನೂ ಉಪದೇಶಿಸಿದ ನಿರ್ಹೇತುಕ ಕೃಪಾನಿಧಿಯಾದ ನನ್ನ ಸ್ವಾಮಿಯನ್ನು (ಸಕಲಪಾಪಗಳೂ ವ್ಯಾಧಿಗಳೂ ಹೋಗುವಂತೆ) ಶಬ್ದಮಾಲಾರೂಪ ವಾದ ಈಪ್ರಬನ್ಧವನ್ನು ರಚಿಸಿ ಸ್ತೋತ್ರಮಾಡಿ, ನಾನು ಪರಮಾನನ್ದವಂ ಪಡೆದೆನು.

(೬) ಕರಿಯಮೇನಿ ಮಿಶೈ ವೆಳಿಯನೀಱು ಶಿಱಿದೇ ಯಿಡುಮ್,
ಪೆರಿಯಕೋಲತ್ತಡಙ್ಕಣ್ಣ ಣ್ ವಿಣ್ಣೋರ್‍ಪೆರುಮಾನ್ ತನ್ನೈ,
ಉರಿಯ ಶೊಲ್ಲಾಲಿಶೈಮಾಲೈಕಳೇತ್ತಿ ಯುಳ್ಳ ಪ್ಪೆಱ್ಱೇಱ್ಕು,
ಅರಿಯದುಣ್ಡೋ ವೆನಕ್ಕಿನ್ಱುತೊಟ್ಟುಮಿನಿ ಯೆನ್ಱುಮೇ.

ಪ್ರ॥ ಕರಿಯ-ಶ್ಯಾಮಳವಾದ, ಮೇನಿಮಿಶೈ - ದಿವ್ಯವಿಗ್ರಹ ಸೌನ್ದರ್ಯಕ್ಕಿಂತ ಮೇಲೆ, ವೆಳಿಯನೀಱು- ಅಂಜನಚೂರ್ಣವನ್ನೂ, ಶಿಱಿದೇ-ಮಿತವಾಗಿ, ಇಡುಮ್- ಅಲಂಕಾರವಾಗಿ ಧರಿಸಿರುವ, ಪೆರಿಯಕೋಲಮ್-ನಿರತಿಶಯಸೌನ್ದರ್ಯಯುಕ್ತವಾದ, ತಡಮ್‍ಕಣ್ಣನ್-ವಿಶಾಲವಾದ ನೇತ್ರಗಳುಳ್ಳವನಾಗಿಯೂ, ವಿಣ್ಣೋರ್ ಪೆರುಮಾನ್ ತನ್ನೈ-ನಿತ್ಯಸೂರೀಶ್ವರನಾಗಿಯೂ ಇರುವ ಸ್ವಾಮಿಯನ್ನು, ಉರಿಯಶೊಲ್ಲಾಲ್- (ಈ ಸೌನ್ದರ್ಯಕ್ಕೆ ತಕ್ಕ) ಉಚಿತವಾದ ಸೂಕ್ತಿಗಳಿಂದ, ಇಶೈಮಾಲೈಕಳ್ - ಗಾನ ಮಾಲೆಗಳನ್ನು ರಚಿಸಿ, ಏತ್ತಿ-ಸ್ತೋತ್ರಮಾಡಿ, ಉಳ್ಳ-ಅನುಭವಿಸುವ, ಪೆಱ್ಱೇಱ್ಕು ಎನಕ್ಕು-ಭಾಗ್ಯವನ್ನು ಪಡೆದ ನನಗೆ, ಇನ್ಱುತೊಟ್ಟುಮ್ - (ಅನುಭವಾರಂಭವಾದ) ಈದಿನ ಮೊದಲು, ಇನಿ-ಇನ್ನು ಮೇಲೆ, ಎನ್ಱುಮ್-ಎಂದೆಂದಿಗೂ (ಮುಂದೆ ಬರುವ ಕಾಲದಲ್ಲೆಲ್ಲಾ), ಅರಿಯದು - ದುರ್ಲಭವಾದುದು, ಉಣ್ಡೋ-ಯಾವುದಾದರೂ ಉಂಟೋ ? (ನನಗೆ ಸರ್ವಾಭೀಷ್ಟಸಿದ್ಧಿಯೆಂದು ಭಾವವು.)

( ಸ-ಗಾ-ರ ॥ )—

ಮೇಘಶ್ಯಾಮಳಮೂರ್ತಿಮಞ್ಜನವಿಧೌ ಚೂರ್ಣಾಂಶರಮ್ಯಾಮ್ಬಕಂ
ಸೂರೀಣಾಮಧಿದೇವಮಚ್ಯುತಮಹಂ ಸ್ತುತ್ವಾಽದ್ಯ ಪದ್ಯೈರ್ಮಮ ।
ಗೀತೈರ್ಭೋಕ್ತುಮಯಂ ಕೃತೀ ಕಿಲ ಮಹಾನ್ ಧನ್ಯೋಽಸ್ಮಿ ! ಕಿಂ ವಾಽಧುನಾ
ಹನ್ತ ! ಪ್ರಾಪ್ಯಮಿತಃ ಪರಂ ಚ ಮಮ ಯತ್ಪೂರ್ಣೋಽಸ್ಮಿ ಭಾಗ್ಯೈರಹಮ್ ॥

ತಾ|| (ದಿವ್ಯಸೌನ್ದರ್ಯಭರಿತನಾದ ಸ್ವಾಮಿಯನ್ನು ಈಪ್ರಕಾರ ಗಾನಮಾಲೆಗಳಿಂದ ಸ್ತುತಿಸಿ ಅನುಭವಿಸುವ ಭಾಗ್ಯವುಳ್ಳ ನನಗೆ ದುರ್ಲಭವಾದುದು ಯಾವುದೂ ಇಲ್ಲವೆಂದು ಹೃಷ್ಟರಾಗುತ್ತಾರೆ.) ದಿವ್ಯವಿಗ್ರಹ ಸೌನ್ದರ್ಯಕ್ಕೆ ಮೇಲೆ ಅಂಜನವನ್ನೂ ಧರಿಸಿ ನಿರತಿಶಯ ಸೌನ್ದರ್ಯಯುಕ್ತವಾದ ನೇತ್ರಗಳುಳ್ಳ ನಿತ್ಯಸೂರೀಶ್ವರನಾದ ಸ್ವಾಮಿಯನ್ನು ನಾನು ಉಚಿತವಾದ ಸೂಕ್ತಿಗಳಿಂದ ಗಾನಮಾಲಾರೂಪವಾದ ಈ ಪ್ರಬನ್ಧವನ್ನು ರಚಿಸಿ ಸ್ತೋತ್ರಮಾಡಿ ಅನುಭವಿಸುವ ಭಾಗ್ಯವಂ ಪಡೆದಿರುವುದರಿಂದ ಇನ್ನುಮೇಲೆ ನನಗೆ ದುರ್ಲಭವಾದ ವಸ್ತುವು ಯಾವುದಾದರೂ ಎಂದಿಗಾದರೂ ಉಂಟೋ ? (ಅನ್ತಹ ವಸ್ತುವು ಯಾವುದೂ ಇಲ್ಲವೆಂದು ಭಾವವು. ಈ ನನ್ನ ಅನುಭವಕ್ಕಿಂತ ಉತ್ಕೃಷ್ಟವಾದ ಅನುಭವವೇ ಇಲ್ಲವೆಂದು ತಾತ್ಪರ್ಯ.)

(೭) ಎನ್ರುಮೊನ್ರಾಕಿ ಯೊತ್ತಾರುಮ್ ಮಿಕ್ಕಾರ್‌ಕಳುಮ್ ತಣ್ತನ-
ಕ್ಕಿನ್ರಿ ನಿನ್ರಾನೈ ಯೆಲ್ಲಾವುಲಕುಮುಡೈಯಾಱ್ ತನ್ನೈ,
ಕುನ್ರಮೊನ್ರಾಲ್ ಮಳೈಕಾತ್ತ ಪಿರಾನೈ ಚ್ಚೊನ್ಮಾಲೈಕಳ್,
ನನ್ರುಶೂಟ್ಟುಮ್ ವಿದಿಯೆಯ್‌ದಿನಮೆನ್ನ ಕುಱೈ ನಮಕ್ಕೇ.

ಪ್ರ|| ಎನ್ರುಮ್-(ಪರತ್ವದಲ್ಲೂ ಅವತಾರದಲ್ಲೂ) ಸರ್ವಾವಸ್ಥೆಗಳಲ್ಲೂ, ಒನ್ರು ಆಕಿ-ಒಂದೇಪ್ರಕಾರವಾಗಿ, ಒತ್ತಾರುಮ್-ಸಮರಾದವರೊ, ಮಿಕ್ಕಾರ್‌ಕಳುಮ್-ಅಧಿಕರಾದವರೂ, ತಣ್ತನಕ್ಕು-ತನ್ನ (ಅಸಾಧಾರಣವಾದ) ಆಕಾರಕ್ಕೆ, ಇನ್ರಿ-ಇಲ್ಲದಂತೆ, ನಿನ್ರಾನೈ-ನಿಂತವನನ್ನು, ಎಲ್ಲಾವುಲಕುಮ್ – ಸರ್ವಲೋಕಗಳನ್ನೂ, ಉಡೈಯಾಱ್‌ತನ್ನೈ – ತನಗೆ ಅಧೀನವಾಗಿಯುಳ್ಳವನನ್ನು, ಮಳೈ-(ಇಂದ್ರನಿಂದ ಬಂದ) ಅತಿವೃಷ್ಟಿರೂಪವಾದ ಆಪತ್ತನ್ನು, ಕುನ್ರಮೊನ್ರಾಲ್-ಒಂದು ಪರ್ವತದ ಮೂಲಕ, ಕಾತ್ತ-ನಿವಾರಣಮಾಡಿದ, ಪಿರಾನೈ-ಸ್ವಾಮಿಯನ್ನು, ಶೊಲ್ ಮಾಲೈಕಳ್-ಶಬ್ದಮಯವಾದ ಮಾಲೆಗಳನ್ನು, ನನ್ರುಶೂಟ್ಟುಮ್-ಅವನು ಆದರದಿಂದ ಧರಿಸುವುದಕ್ಕೆ ತಕ್ಕ, ವಿದಿ-ಭಾಗ್ಯವನ್ನು, ಎಯ್‌ದಿನಮ್ – ನಾವು ಪಡೆದೆವು. ನಮಕ್ಕು-ನಮಗೆ, ಎನ್ನಕುಱೈ-ಏನು ಕೊರತೆ ? (ಯಾವಕೊರತೆಯೂ ಇಲ್ಲ.)

( ಸ–ಗಾ–ರ || )—

ಏಕೋಽಸೌ ಸತತಂ ಸಮಾಧಿಕತರೈರ್ಹೀನೋ ಹರಿಶ್ರೀಧರೋ
ಲೋಕಾನಾಂ ಪ್ರಭುರಚ್ಯುತೋ ಗಿರಿಧರೋ ವರ್ಷಾತ್ ಸ್ವಯಂ ರಕ್ಷಕಃ
ನಾಥಂ ತಂ ಮಮ ಹೃದ್ಯಪದ್ಯಕುಸುಮಸ್ರಗ್ಭಿರ್ಹರಿಂ ಭೂಷಿತಂ
ಕರ್ತುಂ ಭಾಗ್ಯಮಿದಂ ಚ ತಸ್ಯ ಕೃಪಯಾ ಲಬ್ಧಂ ! ನ ಮೇಽನ್ಯಸ್ಪೃಹಾ|

ತಾ|| (ಸಮಾಧಿಕರಹಿತನಾದ ಭೋಗ್ಯತಾತಿಶಯವುಳ್ಳ ಶ್ರೀಕೃಷ್ಣನನ್ನು ಸ್ತೋತ್ರಮಾಡುವ ಭಾಗ್ಯವುಳ್ಳ ನಮಗೆ ಯಾವ ಕೊರತೆಯೂ ಇಲ್ಲವೆಂದು ಹೇಳುತ್ತಾರೆ.) ಸರ್ವಾವಸ್ಥೆಗಳಲ್ಲೂ ಒಂದೇಪ್ರಕಾರವಾಗಿ ಸಮಾಧಿಕರಹಿತನಾಗಿ ನಿಂತ ಸರ್ವಲೋಕೇಶ್ವರನಾದ, ಗೋವರ್ಧನಧಾರಿಯಾಗಿ ಮಳೆಯನ್ನು ನಿವಾರಣಮಾಡಿ ಗೋಗೋಪರಕ್ಷಕನಾದ ಸ್ವಾಮಿಯನ್ನು ಶಬ್ದಮಾಲೆಗಳಿಂದ ಸ್ತುತಿಸುವ ಭಾಗ್ಯವನ್ನು ಪಡೆದಿರುವ ನಮಗೆ ಯಾವ ಕೊರತೆಯುಂಟು ?

(೮) ನಮಕ್ಕುಮ್ ಪೂವಿನ್ಮಿಶೈನಙ್ಗೈಕ್ಕುಮಿನ್ಬನೈ ಞಾಲತ್ತಾರ್
ತಮಕ್ಕುಮ್ ವಾನತ್ತವರ್ಕ್ಕುಮ್ ಪೆರುಮಾನೈ, ತಣ್ ತಾಮರೈ
ಶುಮಕ್ಕುಮ್ ಪಾದಪ್ ಪೆರುಮಾನೈ ಚ್ಚೊನ್ಮಾಲೈಕಳ್, ಶೊಲ್ಲುಮಾ
ಱಮೈಕ್ಕವಲ್ಲೇಱ್ಕಿನಿ ಯಾವರ್ ನಿಕರಕಲ್ವಾನತ್ತೇ.

ಪ್ರ || ನಮಕ್ಕುಮ್ - (ನಿತ್ಯಸಂಸಾರಿಗಳಿಗಿಂತಲೂ ಕೀಳಾದ) ನಮಗೂ, ಪೂವಿನ್ಮಿಶೈ ನಙ್ಗೈಕ್ಕುಮ್ - ಪದ್ಮೋದ್ಭವೆಯಾಗಿ ಭೋಗ್ಯತಾತಿಶಯದಿಂದಲೂ ಆತ್ಮಗುಣ ಪೂರ್ತಿಯಿಂದಲೂ ನಿತ್ಯಸೂರಿಗಳಿಗಿಂತಲೂ ಮೇಲಾದ ಲಕ್ಷ್ಮೀದೇವಿಗೂ ಇನ್ಬನೈ-ಆನನ್ದಜನಕನಾಗಿಯೂ, ಞಾಲತ್ತಾರ್ ತಮಕ್ಕುಮ್-ಅವಿಶೇಷಜ್ಞರಾದ ಈ ಪ್ರಪಂಚದವರಿಗೂ, ವಾನತ್ತವರ್ಕ್ಕುಮ್-ವಿಶೇಷಜ್ಞರಾದ ಪರಮಪದವಾಸಿಗಳಿಗೂ ತಾರತಮ್ಯವಿಲ್ಲದಂತೆ ಆಶ್ರಿತವತ್ಸಲನಾಗಿ ಇರುವ, ಪೆರುಮಾನೈ - ಸ್ವಾಮಿಯನ್ನು, ತಣ್ - ಶೀತಳವಾಗಿ ಭೋಗ್ಯವಾದ, ತಾಮರೈ - ತಾವರೆಪುಷ್ಪಗಳನ್ನು, ಶುಮಕ್ಕುಮ್ - ಧರಿಸುವ, ಪಾದಮ್ - ಪಾದಗಳುಳ್ಳ, ಪೆರುಮಾನೈ - ಸರ್ವೇಶ್ವರನನ್ನು, ಶೊಲ್‌ಮಾಲೈಕಳ್-ಶಬ್ದಸನ್ದರ್ಭರೂಪವಾದ ಮಾಲೆಗಳನ್ನು, ಶೊಲ್ಲುಮ್ ಆಱು-ರಚಿಸುವಂತೆ, ಅಮೈಕ್ಕವಲ್ಲೇಱ್ಕು - ನನ್ನನ್ನು ಪರಿಷ್ಕರಿಸಬಲ್ಲ ನನಗೆ, ಅಕಲ್-ಅತಿವಿಶಾಲವಾದ, ವಾನತ್ತು-ಪರಮಪದದಲ್ಲಿ, ಯಾವರ್-ಯಾರು ತಾನೇ, ಇನಿ ನಿಕರ್-ಇನ್ನು ಸಮಾನರಾಗುವರು? (ಹೀಗಿರುವಲ್ಲಿ ಪರಮಪದದಲ್ಲೂ ನನಗೆ ಸಮಾನರಿಲ್ಲವೆಂದು ಭಾವವು.)

( ಸ-ಗಾ-ರ || )—

ಅಸ್ಮಾಕಂ ಪರಮಃ ಪ್ರಿಯಶ್ಚ ಸತತಂ ಲಕ್ಷ್ಮ್ಯಾಶ್ಚ ಯೋಽಸೌ ಪತಿ-
ರ್ಭೌಮಾನಾಂ ದಿವಿ ವಾಸಿನಾಮಪಿ ಹರಿರ್ನಾಥಶ್ಚ ಪದ್ಮೋಘಪಾತ್ |
ತಂ ಸ್ತೋತುಂ ಮಮ ಸೂಕ್ತಿಹಾರತತಿಭಿರ್ಭಾಗ್ಯಂ ಹಿ ಮೇ ವರ್ತತೇ !
ನ ಸ್ಯಾನ್ಮೇ ಪರಮೇ ಪದೇಽಪಿ ಚ ಸಮಃ ಕಶ್ಚಿತ್ ಸ್ವಯಂ ಭಾಗ್ಯವಾನ್ ||

ತಾ|| (ಅವನ ಉಭಯ ವಿಭೂತಿಯೋಗವನ್ನೂ, ಸೌಕುಮಾರ್ಯಾದಿ ಗುಣಪೂರ್ತಿಯನ್ನೂ ತಕ್ಕಂತೆ ಸ್ತುತಿಸಬಲ್ಲ ನನಗೆ ಸದೃಶರು ಪರಮಪದದಲ್ಲಿಯೂ ಇಲ್ಲವೇ ಇಲ್ಲವೆಂದು ತಮ್ಮ ಭಾಗ್ಯಾತಿಶಯವನ್ನು ಕೊಂಡಾಡುತ್ತಾರೆ.) ನಿತ್ಯಸಂಸಾರಿಗಳಿಗಿಂತಲೂ ಕೀಳಾದ ನಮಗೂ, ನಿತ್ಯಸೂರಿಗಳಿಗಿಂತಲೂ ಮೇಲಾದ ಲಕ್ಷ್ಮೀದೇವಿಗೂ ಒಂದೇವಿಧವಾಗಿ ಆನನ್ದ ಜನಕನಾಗಿಯೂ, ಈ ಲೋಕದವರಿಗೂ ನಿತ್ಯಸೂರಿಗಳಿಗೂ ತಾರತಮ್ಯವಿಲ್ಲದಂತೆ ಆಶ್ರಿತವತ್ಸಲನಾಗಿಯೂ, ಸುಕುಮಾರವಾದ ತಾವರೆಪುಷ್ಪಗಳನ್ನು ಧರಿಸಿರುವ ಪಾದಗಳುಳ್ಳವನಾಗಿಯೂ ಇರುವ ಸ್ವಾಮಿಯನ್ನು ಶಬ್ದಮಾಲಿಗಳಿಂದ ಸ್ತುತಿಸಬಲ್ಲ ನನಗೆ ಪರಮಪದದಲ್ಲಿ ತಾನೇ ಸಮಾನರು ಯಾರು ಇದಾರೆ?

(೯) ವಾನತ್ತುಮ್ ವಾನತ್ತುಳ್ಳುಮ್ಬರುಮ್
ಮಣ್ಣುಳ್ಳುಮ್ಮಣ್ಣಿನ್ ಕೀೞ್
ತ್ತಾನತ್ತುಮ್, ಎಣ್ದಿಶೈಯುಮ್ ತವಿರಾದು ನಿನ್ಱ ತನ್ನೈ
ಕ್ಕೂನಲ್ ಶಙ್ಗತ್ತಡಕ್ಕೈಯವನೈ ಕ್ಕುಡಮಾಡಿಯೈ ವಾನ
ಕ್ಕೋನೈ, ಕ್ಕವಿಶೊಲ್ಲವಲ್ಲೇರ್ಕ್ಕಿನಿ ಮಾಱುಣ್ಡೇ.

ಪ್ರ|| ವಾನತ್ತುಮ್ - ಆಕಾಶವೆಂಬ ಸ್ವರ್ಗದಲ್ಲೂ, ಉಳ್ ವಾನತ್ತು ಊರ್ಧ್ವಾಕಾಶವರ್ತಿಗಳಾದ, ಉಮ್ಬರುಮ್-ಉಪರಿತನಲೋಕಗಳಲ್ಲೂ, ಮಣ್ಣುಳ್ಳುಮ್-ಭೂಲೋಕದಲ್ಲೂ, ಮಣ್ಣಿನ್‌ಕೀೞ್ ತಾನತ್ತುಮ್-ಭೂಮಿಯಕೆಳಗೆ ಪಾತಾಳಸ್ಥಾನಗಳಲ್ಲೂ, ಎಣ್ ತಿಶೈಯುಮ್ - ಎಂಟು ದಿಕ್ಕುಗಳಲ್ಲೂ (ಎಂಟುವಿಧವಾದ ಪದಾರ್ಥಗಳಲ್ಲೂ), ತವಿರಾದು-ಒಂದೂ ತಪ್ಪದಂತೆ, ನಿನ್ಱತನ್ನೈ-ಚೆನ್ನಾಗಿ ಎಲ್ಲವನ್ನೂ ವ್ಯಾಪಿಸಿ ನಿಂತ, ಕೂನಲ್ ಶಙ್ಗಮ್-ಬಗ್ಗಿ ರಮಣೀಯವಾಗಿರುವ ಶಂಖವನ್ನು, ತಡಕ್ಕೈಯವನೈ - ವಿಶಾಲವಾದ ಹಸ್ತದಲ್ಲಿ ಧರಿಸಿರುವವನನ್ನು, ಕುಡಮಾಡಿಯೈ-ಕುಂಭಲೀಲಾಪರನನ್ನು, ವಾನಕ್ಕೋನೈ-ನಿತ್ಯಸೂರಿಗಳಿಗೂ ಭೋಗ್ಯತಮನಾದ ಸ್ವಾಮಿಯನ್ನು—(ಈಪ್ರಕಾರ ವ್ಯಾಪ್ತಿ - ಅವತಾರ - ಪರತ್ವಾದಿಗಳನ್ನೆಲ್ಲಾ ಅನುಸನ್ಧಾನಮಾಡಿ), ಕವಿಶೊಲ್ಲವಲ್ಲೇರ್ಕ್ಕು-ಕವಿತ್ವದಿಂದ ಸ್ತುತಿಸಬಲ್ಲ ನನಗೆ, ಇನಿ-ಇನ್ನು, ಮಾಱ್-ಎದಿರು (ಸಮಾನರಾದವರು), ಉಣ್ಡೇ-ಉಂಟೋ? (ಆ ಸರ್ವೇಶ್ವರನೂ ಕೂಡ ನನಗೆ ಸಮನಲ್ಲ. ನನ್ನ ಭಾಗ್ಯವು ಅಂತಹುದು—ಎಂದು ಭಾವವು.)

( ಸ-ಗಾ-ರೆ || )—

**ಸ್ವರ್ಲೋಕೇ ಪರಮೇ ಪದೇಽಪಿ ಚ ಭುವಿ ಸ್ಥಾನೇಷು ಭೂಮೇರಧೋ-**
**ದೇಶೇಷ್ವಷ್ಟದಿಶಾಸು ಚಾಚ್ಯುತಮುಮುಂ ಸರ್ವೇಶ್ವರಂ ರಕ್ಷಕಮ್ |**
**ಅನ್ತರ್ಗರ್ಭವಿಶಾಲಶಙ್ಖವಿಲಸದ್ಬಾಹುಂ ಸ್ತುವನ್ನಾಥವಂ**
**ಕುವೋ್ಬೇಲ್ಲಾಸಿ ಪರಾತ್ಪರಂ ಕವಯಿತಾ ಸೋಽಹಂ ಕವಿರ್ನಿಸ್ಸಮಃ ||**

ತಾ|| (ಅವನ ವ್ಯಾಪ್ತಿದಶೆ-ಅವತಾರದಶೆ-ಪರತ್ವಾದಿಗಳನ್ನೆಲ್ಲಾ ಪರಿಪೂರ್ಣವಾಗಿ ಅನುಭವಿಸಿ ಸ್ತುತಿಸಬಲ್ಲ ನನಗೆ ಯಾರು ಎಣೆ?–ಎಂದು ಹೇಳುತ್ತಾರೆ.) ಸ್ವರ್ಗಲೋಕದಲ್ಲೂ ಉಪರಿತನಲೋಕಗಳಲ್ಲೂ ಭೂಲೋಕದಲ್ಲೂ ಪಾತಾಳದಲ್ಲೂ ಸಕಲ ದಿಕ್ಕುಗಳಲ್ಲೂ ಸಕಲವಸ್ತುಗಳಲ್ಲೂ ಪರಿಪೂರ್ಣವಾಗಿ ವ್ಯಾಪಿಸಿ ನಿಂತವನಾಗಿಯೂ, ದಿವ್ಯಶಂಖಧಾರಿಯಾಗಿಯೂ, ಕುಂಭಲೀಲಾಪರನಾಗಿಯೂ, ನಿತ್ಯಸೂರಿ ಸಂಸೇವ್ಯನಾಗಿಯೂ ಇರುವ ಸ್ವಾಮಿಯನ್ನು ನನ್ನ ಕವಿತ್ವದಿಂದ ಸ್ತುತಿಸಬಲ್ಲ ನನಗೆ ಸಮಾನರು ಯಾರು ಉಂಟು ? (ಅವನಿಗೂ ಇಂತಹಭಾಗ್ಯವಿಲ್ಲ—ಆದುದರಿಂದ ಅವನೂ ನನಗೆ ಸಮಾನನಲ್ಲವೆಂದು ತಾತ್ಪರ್ಯ.)

(೧೦) ಉಣ್ಡುಮುಮಿೞ್ನ್ದುಮ್ ಕಡನ್ದುಮಿಡನ್ದುಮ್
ಕಿಡನ್ದುನಿನ್ಱುಮ್,
ಕೊಣ್ಡಕೋಲತ್ತೋಡು ವೀಱ್ಱಿರುನ್ದು
ಮಣಙ್ಕೂಡಿಯುಮ್,
ಕಣ್ಡವಾಱ್ಱಾಱ್ಱುನದೇ ಯುಲಕೆನ ನಿನ್ಱಾತನ್ನೈ,
ವಣ್ಡಮಿೞ್ನೂಱ್ಱ ನೋಱ್ಱೇನಡಿಯೇನಾರ್ಕ್ಕಿನ್ನಮಾಱಿಯೇ.

ಪ್ರ|| ಉಣ್ಡುಮ್–(ಪ್ರಳಯದಲ್ಲಿ) ಉದರದಲ್ಲಿ ಧರಿಸಿಯೂ, ಉಮಿೞ್ನ್ದುಮ್-ಪುನಃ ಸೃಷ್ಟಿಮಾಡಿಯೂ, ಕಡನ್ದುಮ್–(ವಾಮನನಾಗಿ) ಅಳೆದೂ, ಇಡನ್ದುಮ್–(ವರಾಹರೂಪಿಯಾಗಿ) ಉದ್ಧರಿಸಿಯೂ, ಕಿಡನ್ದುಮ್–(ಕ್ಷೀರಾಬ್ಧಿಯಲ್ಲಿ) ಶಯನಮಾಡಿಯೂ, ನಿನ್ಱುಮ್ – (ರಾವಣ ವಧಾನನ್ತರ ದೇವತೆಗಳಿಗೆ ದರ್ಶನವನ್ನು ಕೊಡಲು) ನಿಂತವನಾಗಿಯೂ, ಕೊಣ್ಡ – (ಪುನಃ ಅಯೋಧ್ಯೆಗೆಬಂದು ರಾಜ್ಯ ಪಟ್ಟಾಭಿಷೇಕವನ್ನು) ಸ್ವೀಕರಿಸಿದ, ಕೋಲತ್ತೋಡು – ಅಲಂಕಾರಗಳೊಡನೆ, ವೀಱ್ಱಿರುನ್ದುಮ್–(ಸಿಂಹಾಸನದಲ್ಲಿ) ಕುಳಿತೂ, ಮಣಮ್ಕೂಡಿಯುಮ್–ನಿತ್ಯ ಕಲ್ಯಾಣೋತ್ಸವವಾಗುವಂತೆ ಭೂದೇವೀಸಂಶ್ಲೇಷದಿಂದ ರಾಜ್ಯಭಾರವಂ ನಿರ್ವಹಿ

ಸಿಯೂ, ಕಣ್ಡ-(ಹೀಗೆ) ಪ್ರತ್ಯಕ್ಷಸಿದ್ಧವಾದ, ಆಱ್ಱಾಲ್-ನಾನಾವಿಧಾತಿಮಾನುಷ ಚೇಷ್ಟಿತ ಪ್ರಕಾರಗಳಿಂದ, ಉಲಕು-ಲೋಕವೆಲ್ಲಾ, ತನದೇ ಎನ-ತನ್ನದೇ ಎಂದು ಎಲ್ಲರೂ ಹೇಳುವಂತೆ, ನಿನ್ಱಾತನ್ನೈ – ನಿಂತ ಸರ್ವೇಶ್ವರನನ್ನು ಕುರಿತು, ವಣ್ ತಮಿೞ್ ನೂಱ್ಕ – (ಸ್ತೋತ್ರರೂಪವಾದ) ದಿವ್ಯದ್ರಾವಿಡ ಪ್ರಬನ್ಧವಂ ನಿರ್ಮಾಣ ಮಾಡಲು, ನೋಱ್ಱೇ-ಪುಣ್ಯವಂಮಾಡಿದೆನು, ಅಡಿಯಾರ್ಕ್ಕು-ಭಾಗವತರಿಗೆ, (ಈ ಪ್ರಬನ್ಧವು) ಇನ್ಬಮಾರಿ-ಆನನ್ದವರ್ಷಿಯಾದ ಮೇಘವಾಗಿದೆ.

( ಸ-ಗಾ-ರ || )—

ಭುಕ್ತ್ವಾ ಚಾಪಿ ಸಮುದ್ಗಿರನ್ನಮಪಿ ತಂ ಚಾಕ್ರಮ್ಯ ಪಾದೇನ ಚ
ಪ್ರೋದ್ಧೃತ್ಯಾಪಿ ಶಯಾನಮೇವಮಭಿಷಿಕ್ತಾಲಂಕೃತಸ್ಥಾಪನಮ್ |
ರಾಜ್ಯೇ ಚೋತ್ಸವಸಮ್ಭ್ರಮಾನ್ವಿತಮಮುಂ ಪ್ರತ್ಯಕ್ಷಚೇಷ್ಟಾಕುಲಂ
ಸ್ತೌಮ್ಯೇವಂ ಜಗದೀಶ್ವರಂ ದ್ರವಿಡಸದ್ಬನ್ಧೈರ್ಬುಧಾನಾಂ ಪ್ರಿಯೈಃ ||

ತಾ|| (ಹೀಗೆ ಸರ್ವೇಶ್ವರನ ಚೇಷ್ಟಿತಗಳನ್ನೆಲ್ಲಾ ಕೀರ್ತನಮಾಡಿ ಈ ದಿವ್ಯ ಪ್ರಬನ್ಧವನ್ನು ರಚಿಸಿ ನಾನು ಭಾಗವತೋತ್ತಮರಿಗೆಲ್ಲಾ ಇದರಿಂದ ಆನನ್ದಜನಕ ನಾದೆನೆಂದು ಹೇಳುತ್ತಾರೆ.) ಲೋಕವನ್ನೆಲ್ಲಾ ಪ್ರಳಯದಲ್ಲಿ ಭಕ್ಷಿಸಿ, ಪುನಃ ಸೃಷ್ಟಿ ಮಾಡಿ, ಅಳೆದು, ಉದ್ಧರಿಸಿ, ಶಯನಮಾಡಿ, ದೇವಸೇವ್ಯನಾಗಿ ಅಲಂಕೃತನಾಗಿ ನಿಂತು, ಕುಳಿತು, ನಿತ್ಯಕಲ್ಯಾಣವಂ ಧರಿಸಿ, ರಾಜ್ಯಭಾರವಂ ಮಾಡಿ, ಹೀಗೆ ನಾನಾ ಪ್ರಕಾರಗಳಿಂದ ಪ್ರತ್ಯಕ್ಷಸಿದ್ಧವಾಗಿ ಸರ್ವಲೋಕಗಳಿಗೂ ಇವನೇ ನಾಯಕನೆಂದು ಎಲ್ಲರೂ ಹೊಗಳುವಂತೆ ನಿಂತ ಸರ್ವೇಶ್ವರನನ್ನು ಸ್ತುತಿಸುವುದಕ್ಕೆ ಈ ದಿವ್ಯ ಪ್ರಬನ್ಧವಂ ರಚಿಸುವ ಭಾಗ್ಯವುಳ್ಳವನಾದೆನು. ಈ ಪ್ರಬನ್ಧವು ಭಾಗವತೋತ್ತಮರಿಗೆ ಆನನ್ದವರ್ಷಿಯಾದ ಮೇಘವಾಗಿದೆ.

(೧೧) ಮಾರಿ ಮಾಱಾದ ತಣ್ಣಮ್ಮಲೈ ವೇಙ್ಗಡತ್ತಣ್ಣಲೈ,
ವಾರಿ ಮಾಱಾದ ಪೈಮ್ಬೂಮ್ಬೊೞಿಲ್ಶೂೞ್
ಕುರುಕೂರ್ನಕರ್,
ಕಾರಿಮಾಱನ್ ಶಡಕೋಪನ್ ಶೊಲ್ಲಾಯಿರತ್ತಿಪ್ಪತ್ತಾಲ್,
ವೇರಿಮಾಱಾದ ಪೂಮೇಲಿರುಪ್ಪಾಳ್ ವಿನೈ ತೀರ್ಕ್ಕುಮೇ.

ಪ್ರ|| ಮಾರಿಮಾಱಾದ-ವೃಷ್ಟಿಯು ಅವಿಚ್ಛಿನ್ನವಾಗಿರುವಂತೆ, ತಣ್-ಅತಿ ಶೀತಳವಾಗಿ, ಅಮ್-ರಮಣೀಯವಾದ, ಮಲೈ-ಪರ್ವತವಾದ, ವೇಙ್ಗಡತ್ತು-

ವೇಂಕಟಾದ್ರಿಯಲ್ಲಿ ಸರ್ವಸೇವ್ಯನಾಗಿ ನಿಂತಿರುವ, ಅಣ್ಣಲೈ-ಸ್ವಾಮಿಯನ್ನು ಕುರಿತು, ವಾರಿಮಾಡ್ತಾದ-ಜಲಸಮೃದ್ಧಿಯು ಅವಿಚ್ಛಿನ್ನವಾಗಿರುವ, ಪೈಮ್‌ಪೂಮ್‌ಪೊಳ್ಗಿಲ್-ದರ್ಶನೀಯವಾಗಿ ಪುಷ್ಪಸಮೃದ್ಧಿಯುಳ್ಳ ಉದ್ಯಾನಗಳಿಂದ, ಶೂಳ್-ಪರಿವೃತವಾದ, ಕುರುಕೂರ್‌ನಕರ್-ಕುರುಕಾಪುರಿಯಲ್ಲಿ, ಕಾರಿ-ಕಾರಿ ಎಂಬ ಮಹಾತ್ಮರಿಗೆ ಪುತ್ರರಾದ, ಮಾಱ್ಱ-ಮಾಱ್ಱ ಎಂಬ ನಾಮಧೇಯವುಳ್ಳ, ಶಡಕೋಪ‌ಱ - ನಮ್ಮಾೞ್ವಾರ್ರು, ಶೊಲ್-ಹೇಳಿದ (ರಚಿಸಿದ), ಆಯಿರತ್ತು-ಸಹಸ್ರಪದ್ಯಮಾಲೆಯೊಳು, ಇಪ್ಪತ್ತಾಲ್ -ಈ ದಶಕದಿಂದ, ವೇರಿಮಾಱ್ಱಾದ-ಮಧುಪ್ರವಾಹವು ಅವಿಚ್ಛಿನ್ನವಾಗಿ ಸ್ರವಿಸುವ, ಪೂಮೇಲ್-ತಾವರೆಹೂವಿನ ಮೇಲೆ, ಇರುಪ್ಪಾಳ್-ನಿತ್ಯವಾಸಮಾಡುವ ಲಕ್ಷ್ಮಿಯು, ವಿನೈ-ಸಕಲ ಪಾಪಗಳನ್ನೂ, ತೀರ್‌ಕ್ಕುಮ್-ತನ್ನ ಕಟಾಕ್ಷದಿಂದ ನಾಶಪಡಿಸಿ ಆಶ್ರಿತರನ್ನು ರಕ್ಷಿಸುವಳು.

( ಸ-ಗಾ-ರ || )—

ವರ್ಷೈಸ್ಸನ್ತತಶೀತಲೇ ಸುರುಚಿರೇ ಶ್ರೀವೇಂಕಟಾದ್ರೌ ಪ್ರಭುಂ
ಸಸ್ಯಾದ್ಯೈಸ್ಸುಸಮೃದ್ಧದಿವ್ಯಕುರುಕಾಪುರ್ಯಾಶ್ಶಠಾರಿಃ ಪ್ರಭುಃ |
ಸ್ತೋತುಂ ಚಾಹ ಸಹಸ್ರಪದ್ಯಸರಣಿಂ ರಮ್ಯಾಂ ಮಹಾತ್ಮಾ ಮುನಿ-
ಸ್ತತ್ರೇದಂ ದಶಕಂ ಭುವೀಹ ಪಠತಾಂ ಪದ್ಮಾಲಯಾಽಘಂ ಹರೇತ್ ||

ತಾ|| (ಈ ದಶಕ ಪಠನದಿಂದ ಲಕ್ಷ್ಮೀದೇವಿಯು ಸನ್ತುಷ್ಟೆಯಾಗಿ ಆಶ್ರಿತರ ಪಾಪಗಳನ್ನೆಲ್ಲಾ ನಿವಾರಣಮಾಡುತ್ತಾಳೆಂದು ಹೇಳುತ್ತಾರೆ.) ಅವಿಚ್ಛಿನ್ನ ವರ್ಷದಿಂದ ಶೀತಳವಾಗಿ ರಮಣೀಯವಾಗಿರುವ ವೇಂಕಟಾದ್ರಿಯ ಸ್ವಾಮಿಯನ್ನು ಕುರಿತು ಕುರುಕಾಪುರೀಶ್ವರರಾದ "ಕಾರಿಮಾಱ್ಱ" ಎಂಬ ಶ್ರೀ ಶಠಾರಿಮುನಿವರ್ಯರಿಂದ ಸ್ತೋತ್ರರೂಪವಾಗಿ ರಚಿಸಲ್ಪಟ್ಟ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಪಠನಮಾಡುವವರ ಪಾಪಗಳನ್ನೆಲ್ಲಾ ಲಕ್ಷ್ಮೀದೇವಿಯು ನಿವಾರಣಮಾಡಿ, ಅವರನ್ನು ರಕ್ಷಿಸುವಳು.

( ದ್ರು-ಉ-ಸಂ || )—

ಆನನ್ದನಿರ್ಭರಮಧೀನವಿಭೂತಿಯುಕ್ತಂ
ವೈಕುಣ್ಠನಾಥಮಥ ವೀಕ್ಷ್ಯ ಮುನಿಸ್ಸ್ವತಸ್ಸಃ |
ನಾನ್ಯಸ್ಸಮೋಽಸ್ತಿ ಮಮ ನಾಪ್ಯನವಾಪ್ಯಮದ್ಯೇ-
ತ್ಯಾನನ್ದಪೂರಮಧಿಗಮ್ಯ ಮಮಾಸಸಾದ ||

( ದ್ರು-ಉ--ತಾ-ರ || )—

ಅಪಸ್ನಾನನ್ಯಬನ್ಧೌ ಸರಸಿಜನಿಲಯಾವಲ್ಲಭೇ ಸಾನ್ದ್ರಮೋದೇ
ಭಕ್ತಾಘಧ್ವಂಸಶೀಲೇ ತದುಚಿತಸಮಯಾಶ್ವಾಸದಾನಪ್ರವೀಣೇ |
ಕರ್ಪೂರಾಲೇಪಶೋಭೇ ಸಮಧಿಕರಹಿತೇ ತೋಷಕೇ ಸರ್ವಪೂರ್ಣೇ
ಕೃಷ್ಣೇ ಸ್ತುತ್ಯಾದಿಭಾಜಾಂ ಶಠರಿಪುರವದದ್ಧನ್ಯತಾಂ ನಿನ್ದಿತಾನ್ಯಃ ||

(ಈ ಪಞ್ಚಮದಶಕದ ಸಾರಾಂಶ)—

ಈ ಐದನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಮೋಹಶಾನ್ತಿಯಂ ಪಡೆದು, ಅವನ ಅಖಿಲ ಲೋಕನಿರ್ವಾಹಕತ್ವವನ್ನೂ, ಲಕ್ಷ್ಮೀಪತಿತ್ವವನ್ನೂ, ಆನನ್ದಾದಿ ಗುಣಯೋಗವನ್ನೂ, ಮಹೋಪಕಾರಕತ್ವವನ್ನೂ, ಜ್ಞಾನಭಕ್ತಿ ಜನಕತ್ವವನ್ನೂ, ವಿಗ್ರಹವೈಲಕ್ಷಣ್ಯವನ್ನೂ, ಭೋಗ್ಯತಾತಿಶಯವನ್ನೂ, ಉಭಯ ವಿಭೂತಿಯೋಗವನ್ನೂ, ಸರ್ವವ್ಯಾಪಕತ್ವಾದಿ ಗುಣಾತಿಶಯಗಳನ್ನೂ, ದರ್ಶನೀಯ ವ್ಯಾಪಾರವಿಶೇಷಗಳನ್ನೂ ಅನುಸನ್ಧಾನಮಾಡಿ ಇವುಗಳನ್ನೆಲ್ಲಾ ವರ್ಣಿಸುವಂತೆ ಈ ದಿವ್ಯಪ್ರಬನ್ಧ ರಚನವಂ ಮಾಡುವ ಭಾಗ್ಯವುಳ್ಳ ನನಗೆ ಸಮಾನರು ಯಾರೂ ಇಲ್ಲವೆಂದು ಅತ್ಯನ್ತ ಸನ್ತುಷ್ಟರಾಗಿ ಲಕ್ಷ್ಮೀಕಟಾಕ್ಷರೂಪವಾದ ದಶಕಪಠನ ಫಲವನ್ನೂ ನಿರೂಪಿಸಿರುತ್ತಾರೆ.

---

ಶ್ರೀಃ

## ಚತುರ್ಥಶತಕದಲ್ಲಿ—ಷಷ್ಠದಶಕ.

(ತೀರ್ಪ್ಪಾರೈಯಾಮಿನಿ —)

(ಈ ದಶಕದಲ್ಲಿ—ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ಪುನಃ ಮೋಹಾವಿಷ್ಟರಾದುದನ್ನು ನೋಡಿ, ಜನನಿಯರು ಕ್ಷುದ್ರದೇವತಾ ಪೂಜೆಯಂ ಮಾಡಲುದ್ಯುಕ್ತರಾಗಿರುವುದನ್ನು ನಿವಾರಣಮಾಡಿ ಅವಳ ಸಖಿಯು ಶ್ರೀ ಭಗವನ್ನಾಮ ಸಂಕೀರ್ತನವೂ ಶ್ರೀ ವಿಷ್ಣುಭಕ್ತರ ಪಾದಧೂಳಿಯೂ ಇವಳ ರೋಗಕ್ಕೆ ದಿವ್ಯೌಷಧವೆಂದು ಹೇಳುತ್ತಾಳೆ.)

---

(೧) ತೀರ್ಪ್ಪಾರೈಯಾಮಿನಿ ಯೆಙ್ಙನಮ್
ನಾಡುದುಮನ್ನೈಮೀರ್,
ಒರ್ಪ್ಪಾಲಿವ್ವೊಣ್ಣುದಲುಱ್ಱ ನನ್ನೋಯಿದು
ತೇಱಿನೋಮ್,
ಪೋರ್ಪ್ಪಾಕುತಾನ್ ಶೆಯ್ದನ್ಱೈವರ್ಕ್ಕೈ ವೆಲ್ವಿತ್ತ,
ಮಾಯಪ್ಪೋರ್
ತ್ತೇರ್ಪ್ಪಾಕನಾರ್ಕ್ಕಿವಳ್ ಶಿನ್ದೈ ತುೞಾಯ್ ತ್ತಿಶೈಕ್ಕಿನ್ಱದೇ.

ಪ್ರ॥ ಅನ್ನೈಮೀರ್-ಜನನಿಯರೇ ! ಇನಿ-ಇನ್ನು, ತೀರ್ಪ್ಪಾರೈ-(ಇವಳ) ರೋಗಪರಿಹಾರ ಮಾಡುವವರನ್ನು, ಯಾಮ್ - ನಾವು, ಎಙ್ಙನಮ್ - ಹೇಗೆ, ನಾಡುದುಮ್-ಹುಡುಕುವೆವು ? ಓರ್ಪ್ಪಾಲ್-ಈಗ ಚೆನ್ನಾಗಿ ನಿರೂಪಿಸೋಣದ ರಿಂದ, ಇ ಒಳ್ನುದಲ್-ಈ ರಮಣೀಯವಾದ ಲಲಾಟವುಳ್ಳ ಇವಳು, ಉಱ್ಱ-ಪಡೆದಿರುವ, ನಲ್-ವಿಲಕ್ಷಣವಾದ, ಇದು ನೋಯ್ - ಈ ರೋಗವನ್ನು, ತೇಱಿನೋಮ್ - ನಿರ್ಣಯಿಸಿದೆವು. ಪೋರ್ - ಯುದ್ಧಕ್ಕೆ ಬೇಕಾದ, ಪಾಕು-ಸಕಲ ಸಾಮಗ್ರೀ ನಿರ್ವಾಹವನ್ನೆಲ್ಲಾ, ತಾನ್-ತಾನೇ, ಶೆಯ್ದು-ಮಾಡಿ, ಅನ್ಱು-ಆ ಕಾಲದಲ್ಲಿ, ಐವರ್ಕ್ಕೈ-ಐದುಮಂದಿ ಪಾಂಡವರನ್ನು, ವೆಲ್ವಿತ್ತ-ಜಯಿಸುವಂತೆ ಮಾಡಿದ, ಮಾಯಪ್ಪೋರ್-ಕೃತ್ರಿಮಯುದ್ಧದಲ್ಲಿ, ತೇರ್ಪ್ಪಾಕನಾರ್ಕ್ಕು - (ಪಾರ್ಥನಿಗೆ) ಸಾರಥಿಯಾಗಿ ನಿಂತವನನ್ನು ಕುರಿತು, ಇವಳ್- ಇವಳ, ಶಿನ್ದೈ-ಮನಸ್ಸು, ತುೞಾಯ್-ಭ್ರಮಿಸಿ, ತಿಶೈಕ್ಕಿನ್ಱದು-ಮೋಹಾವಿಷ್ಟವಾಗುತ್ತಿದೆ.

( ಸ-ಗಾ-ರ ॥ )—

ಮಾತಃ ! ಪಶ್ಯ ನಿದಾನಮೇವ ಹಿ ರುಜೋಽಪ್ಯಸ್ಯಾ ನ ವಿದ್ಮೋ ವಯಂ !
ಕಿಂ ಪಶ್ಯಾಮ ಚಿಕಿತ್ಸಕಾನ್ ? ಕಥಮಿದಂ ಚೇತ್ಯೇವ ಚಿನ್ತ್ಯೇತ ಚೇತ್ ।
ಅಸ್ಯಾ ರೋಗನಿದಾನಮದ್ಯ ಹಿ ವಯಂ ನಿರ್ಣೀಯ ವಿದ್ಮಸ್ತ್ವಯಂ
ಯುದ್ಧೇ ಪಂಚಜಯಾವಹಸ್ಯ ರಮಣೀ ಶ್ರೀಪಾರ್ಥಸೂತಸ್ಯ ಹಿ ॥

ತಾ॥ (ಈ ನಾಯಕಿಯ ಸಖಿಯು ಜನನಿಯರನ್ನು ಕುರಿತು ಹೇಳುತ್ತಾಳೆ.) ಜನನಿಯರೇ ! ಇವಳ ರೋಗಕ್ಕೆ ಚಿಕಿತ್ಸಕರನ್ನು ನಾವು ಎಲ್ಲಿ ಹುಡುಕೋಣ ? ಚೆನ್ನಾಗಿ ಆಲೋಚಿಸಿ ನೋಡಿ ಇವಳ ರೋಗದ ನಿದಾನವನ್ನು ನಾವು ನಿರ್ಣಯಿಸಿರುತ್ತೇವೆ—ಕೇಳಿರಿ. ಪಂಚಪಾಂಡವರಿಗೆ ಯುದ್ಧದಲ್ಲಿ ಜಯವನ್ನುಂಟುಮಾಡಿದ

ತಾ|| (ಅಕೃತ್ಯಗಳನ್ನು ಮಾಡದೆ ಅವನ ಪಾದಗಳನ್ನು ಕೀರ್ತನಮಾಡಿರಿ ; ಅದೇ ಇವಳಿಗೆ ದಿವ್ಯೌಷಧವೂ ಆಗುವುದೆನ್ನುತ್ತಾಳೆ.) ಜನನಿಯರೇ ! ನಾನು ಹೇಳಿದುದನ್ನು ಮಾಡಿ ನೋಡಿರಿ. ಈ ಕಣಿ ಹೇಳುವ (ಕ್ಷುದ್ರದೇವತಾ ಪೂಜಾ ಪರವಾದ ಮಾತುಗಳನ್ನು ಹೇಳುವ) ಹೆಂಗಸಿನ ಮಾತುಗಳನ್ನು ಕೇಳಿ ನೀವು ಯಾವುದೋ ಅಕಾರ್ಯವನ್ನೆಲ್ಲಾ ಮಾಡಿ ಅಲ್ಲಿ ಮದ್ಯಮಾಂಸಾದಿಗಳನ್ನು ಚೆಲ್ಲಿ ಹೇಯವಾದ ಕೃತ್ಯವನ್ನು ಮಾಡಬೇಡಿರಿ. ನೀವು ಮಧುಸ್ಯನ್ದಿಯಾದ ತುಳಸಿಯಿಂದ ಅಲಂಕೃತವಾದ ಕಿರೀಟವುಳ್ಳ ಮಾಯಾಚೇಷ್ಟಿತನಾದ ಸ್ವಾಮಿಯ ಪಾದಗಳಿಗೆ ಮಂಗಳಾಶಾಸನ ಮಾಡಿದರೆ ಅದೇ ಇವಳ ವ್ಯಾಧಿಗೆ ದಿವ್ಯೌಷಧವಾಗಿಯೂ ಭೋಗ್ಯವಾಗಿಯೂ ಇರುವುದು.

(೪) ಮರುನ್ದಾಕುಮೆನ್ಱಙ್ಗೋರ್ ಮಾಯುವಲವೈ ಶೊಲ್
ಕೊಣ್ಡು ನೀರ್,
ಕರುಮ್ ಶೋಱುಮ್ ಮಱ್ಱೈ ಚ್ಚೆಮ್ ಶೋಱುಮ್
ಕಳನಿೞೈತ್ತೆನ್ಪಯನ್,
ಒರುಙ್ಗಾಕವೇ ಯುಲಕೇೞುಮ್ ವಿೞುಙ್ಗಿ ಯುಮಿೞ್ನ್ದಿಟ್ಟ,
ಪೆರುನ್ದೇವನ್ ಪೇರ್ ಶೊಲ್ಲಕಿಱ್ಕಿಲಿವಳೈ ಪ್ಪೆಱುದಿರೇ.

ಪ್ರ|| ಮರುನ್ದು ಆಕುಮೆನ್ಱು – ಔಷಧವಾಗುವುದೆಂದು ನಂಬಿ, ಅಙ್ಗು – ಯಾವುದೋ ಒಂದು ಸ್ಥಲದ, ಓರ್-ಒಂದು, ಮಾಯವಲವೈ-ಕೃತ್ರಿಮ ಬುದ್ಧಿ ಯುಳ್ಳ ದುಷ್ಟಹೆಂಗಸಿನ, ಶೊಲ್‌ಕೊಣ್ಡು – ಮಾತನ್ನು ಕೇಳಿ, ನೀರ್-ನೀವು, ಕರುಮ್ ಶೋಱುಮ್ – ಕರೀ ಅನ್ನವನ್ನೂ, ಮಱ್ಱೈ – ಮತ್ತೂ, ಶೆಮ್ ಶೋಱುಮ್-ಕೆಂಪು ಅನ್ನವನ್ನೂ, ಕಳನ್-(ದೇವತಾನ್ತರದ) ಮುಂದಲ ಸ್ಥಳದಲ್ಲಿ, ಇೞೈತ್ತು-ಇಟ್ಟರೆ, ಎನ್ ಪಯನ್-ಏನುಫಲ ? ಉಲಕು ಏೞುಮ್-ಸಕಲ (ಸಪ್ತ) ಲೋಕಗಳನ್ನೂ, ಒರುಙ್ಗಾಕವೇ-ಒಂದೇಸಲಕ್ಕೆ, ವಿೞುಙ್ಗಿ – ನುಂಗಿ (ಭಕ್ಷಿಸಿ), ಉಮಿೞ್ನ್ದಿಟ್ಟ-ಪುನಃ ಹೊರಗೆ ಆವಿರ್ಭವಿಸುವಂತೆ ಮಾಡಿದ, ಪೆರುನ್ದೇವನ್-ಪರ ದೇವತೆಯಾದ ಭಗವನ್ತನ, ಪೇರ್-ನಾಮವನ್ನು, ಶೊಲ್ಲಕಿಱ್ಕಿಲ್ – ಹೇಳಬಲ್ಲಿ ರಾದರೆ, ಇವಳೈ-(ವಿಲಕ್ಷಣೆಯಾದ) ಇವಳನ್ನು, ಪೆಱುದಿರ್-ನೀವುಗಳು (ಆರೋಗ್ಯ ದೊಂದಿಗೆ ಬಾಳುವಂತೆ) ಪಡೆಯುವಿರಿ.

(ಸ-ಗಾ-ರ ||)—

ದಿವ್ಯಂ ಭೇಷಜಮೇತದಿತ್ಯಪಿ ವೃಥಾ ಕ್ಷುದ್ರಾಂ ತು ಯಾಂ ಕಾಂ ಚಿದ-
ಪ್ಯೇನಾಂ ಮಾಽನುಗತಾಸ್ಸ್ಮ ಹೇಯಚರಿತೇ ಕ್ಷುದ್ರಾಲಯೇ ಚಾರ್ಪಣಾತ್|
ಅನ್ನಂ ನೀಲತಮಂ ಚ ರಕ್ತಮಪಿ ತತ್ರಾನೀಯ ಕಿಂ ಸ್ಯಾತ್ಫಲಂ ?
ಸೇಯಂ ಜೀವತಿ ಸಪ್ತಲೋಕಸವಿತುರ್ವಿಷ್ಣೋಸ್ತು ಸಂಕೀರ್ತನಾತ್ ||

ತಾ|| (ವಂಚನಪರೆಯಾದ ಈ ಯಾವಳೋ ಒಬ್ಬ ಹೆಂಗಸಿನ ಮಾತನ್ನು ಕೇಳಿ ಕ್ಷುದ್ರದೇವತಾಪೂಜೆಯಂ ಮಾಡೋಣವು ನಿಷ್ಫಲವಾದುದರಿಂದ ಆಪತ್ಸಖನಾದ ಸರ್ವೇಶ್ವರನ ನಾಮಸಂಕೀರ್ತನವಂ ಮಾಡಿದರೆ ಇವಳು ಆರೋಗ್ಯದಿಂದ ಬಾಳುವಳು—ಎನ್ನುತ್ತಾಳೆ.) ಇದು ಚಿಕಿತ್ಸೆಯೆಂದು ಯಾವುದೋ ಒಂದು ಹೆಂಗಸಿನ ಕೃತ್ರಿಮ ವಚನಗಳನ್ನು ಕೇಳಿ ನೀವು ಕರೀ ಅನ್ನವನ್ನೂ ಕೆಂಪು ಅನ್ನವನ್ನೂ (ಆ ಕ್ಷುದ್ರದೇವತೆಯ) ಮುಂದೆ ಇಟ್ಟರೆ ಏನು ಪ್ರಯೋಜನ? ಅನ್ತಹ ಅಕೃತ್ಯವನ್ನು ಬಿಟ್ಟು—ಸಕಲಲೋಕಗಳನ್ನೂ ಭಕ್ಷಿಸಿ ರಕ್ಷಿಸಿ ಪುನಃ ಸೃಷ್ಟಿಸಿದ ಮಹೋಪಕಾರಕನಾದ ಪರಾತ್ಪರ ಸ್ವಾಮಿಯ ನಾಮಸಂಕೀರ್ತನವಂ ಮಾಡಿದರೆ ಇವಳು ಬದುಕುವಳು.

(೫) ಇವಳ್ಳೈ ಪ್ಪೆಱುಮ್ಪರಿಶಿವ್ವಣಙ್ಗಾಡುದಲನ್ಱನ್ದೋ,
ಕುವಳೈ ತ್ತಡಙ್ಕಣ್ಣುಮ್ ಕೋವೈ ಚ್ಚೆವ್ವಾಯುಮ್ ಪಯನ್ದನಳ್,
ಕವಳಕ್ಕಡಾಕ್ಕಳಿಱಟ್ಟ ಪಿರಾನ್ ತಿರುನಾಮತ್ತಾಲ್,
ತವಳಪ್ಪೊಡಿ ಕ್ಕೊಣ್ಡು ನೀರಿಟ್ಟಿಡುಮಿನ್ಱಣಿಯುಮೇ.

ಪ್ರ|| ಇವಳ್ಳೈ-ಇವಳನ್ನು, ಪೆಱುಮ್ - ಪಡೆಯುವ, ಪರಿಶು - ಪ್ರಕಾರವು, ಇ ಅಣಙ್ಗಾಡುದಲ್ ಅನ್ಱು - ಈ ಭೂತಾವೇಶದಿಂದ ಆಡೋಣವಲ್ಲ. ಅನ್ದೋ!- ಅಯ್ಯೋ! (ಇವಳಿಗೆ ನೋವು ಹೆಚ್ಚಿದೆಯಲ್ಲವೇ!) ಕುವಳೈ ತಡಮ್ ಕಣ್ಣುಮ್- ಕುವಲಯದಂತೆ ವಿಶಾಲವಾದ ನೇತ್ರಗಳೂ, ಕೋವೈ ಶೆಮ್ ವಾಯುಮ್-ಬಿಂಬಫಲದಂತೆ ಕೆಂಪಗೆ ಇರುವ ವಕ್ತ್ರವೂ, ಪಯನ್ದನಳ್-ತಮ್ಮ ತಮ್ಮ ಬಣ್ಣವು ಹೋಗಿ ವೈವರ್ಣ್ಯ ಪಡೆಯುವಂತೆ ಆದಳು. (ಇದಕ್ಕೆ ಪರಿಹಾರವೇನೆಂದರೆ-) ಕವಳಮ್ ಕಡಾಮ್ - ಮದಕರವಸ್ತುಗಳನ್ನು ಭಕ್ಷಿಸಿ ಅತ್ಯನ್ತ ಮದಿಸಿ ಇರುವ, ಕಳಿಱು - ಆನೆಯನ್ನು (ಕುವಲಯಾಪೀಡವನ್ನು), ಅಟ್ಟ-ಕೊಂದು (ಮಧುರೆಯಲ್ಲಿ ಸ್ತ್ರೀಜನರಿಗೆ

ದರ್ಶನೀಯನಾದ), ಪಿರಾನ್-ಸ್ವಾಮಿಯಾದ ಕೃಷ್ಣನ, ತಿರುನಾಮತ್ತಾಲ್-ನಾಮ ಸಂಕೀರ್ತನದಿಂದ, ತವಳವರ್-ಪರಿಶುದ್ಧವಾದ, ಪೊಡಿ-(ಭಾಗವತರ) ಪಾದಧೂಳಿಯನ್ನು, ಕೊಣ್ಡು-ತಂದು, ನೀರ್ - ನೀವು, ಇಟ್ಟಿಡುಮಿನ್ - ಪ್ರಯೋಗಿಸಿರಿ. ತಣಿಯುಮ್-(ಇವಳ ವೈವರ್ಣ್ಯವೂ ವ್ಯಾಧಿಯೂ) ಶಾಂತವಾಗುವುದು.

( ಸ-ಗಾ-ರ || )—

**ಕ್ಷುದ್ರೋಽಯಂ ತು ನ ಹಿ ಕ್ರಮೋ ಬತ! ಬತ! ಪ್ರಾಪ್ತಂ ಚ ಬಿಂಬಾಧರಾ-**
**ಮೇನಾಮುತ್ಪಲಲೋಚನಾಮುಹಹ! ಹಾ ಭೀತಾ ತ್ವಿಯಂ ಸೀದತಿ |**
**ದೇವಂ ಮತ್ತಗಜಪ್ರಣಾಶಕಮಮುಂ ಸಂಕೀರ್ತ್ಯ ನಾಮ್ನಾ ಹರಿಂ**
**ತತ್ಪಾದಾಮ್ಬುಜರೇಣುಭಿಶ್ಚ ಕುರುತಾದ್ಯೈನಾಂ ತು ಸಂಜೀವಿತಾಮ್ ||**

ತಾ|| (ನೀವು ಮಾಡುವ ಚಿಕಿತ್ಸೆಯು ಇವಳಿಗೆ ವ್ಯಾಧಿಯನ್ನು ಹೆಚ್ಚಿಸುತ್ತಿದೆ. ಅದನ್ನು ಬಿಟ್ಟು ವ್ಯಾಧಿಗೆ ತಕ್ಕ ಪರಿಹಾರವಂ ಮಾಡಿರಿ—ಎಂದು ಹೇಳುತ್ತಾಳೆ.) ಇವಳನ್ನು ಬದುಕಿಸುವ ಮಾರ್ಗವು ಇದಲ್ಲ. ಅಯ್ಯೋ! ನೀವು ಹೀಗೆ ಭೂತಾವೇಶದಿಂದ ಕ್ಷುದ್ರದೇವತಾಪೂಜೆ ಮಾಡೋಣದರಿಂದ ಇವಳ ವ್ಯಾಧಿಯು ಹೆಚ್ಚುತ್ತಿದೆ. ಇವಳ ವಿಶಾಲವಾದ ನೇತ್ರಗಳೂ, ಬಿಂಬಫಲದಂತೆ ಇದ್ದ ಅಧರವೂ ವೈವರ್ಣ್ಯವಂ ಹೊಂದಿವೆ. ಆದುದರಿಂದ ನೀವು ಇದನ್ನು ಬಿಟ್ಟು—ಕುವಲಯಾಪೀಡ ಮರ್ದನವಂ ಮಾಡಿದ ಶ್ರೀಕೃಷ್ಣನ ನಾಮಸಂಕೀರ್ತನವಂ ಮಾಡಿ, ಭಾಗವತರ ಶ್ರೀ ಪಾದಧೂಳಿಯನ್ನು ತಂದು ಪ್ರಯೋಗಿಸಿರಿ. ಇವಳಿಗೆ ರೋಗ ಶಾನ್ತಿಯಾಗುವುದು.

(೬) ತಣಿಯುಮ್ ಪೊೞುದಿನ್ದಿ ನೀರಣಙ್ಗಾಡುದಿರನ್ನೈಮೀರ್,
ಪಿಣಿಯುಮೊೞಿಕಿನ್ದಿಲ್ಲೈ ಪೆರುಕುಮಿಮವಲ್ಲಾಲ್,
ಮಣಿಯಿಲಣಿನಿಱಮಾಯನ್ ತಮರಡಿ ನೀಱು ಕೊಣ್ಡು
ಅಣಿಯು ಮುಯಲಿಲ್ ಮೀೞ್ಕಿಲ್ಲೈ ಕಣ್ಡೀರಿವ್ವಣಙ್ಗುಕ್ಕೇ.

ಪ್ರ|| ಅನ್ನೈಮೀರ್ - ಜನನಿಯರೇ!, ತಣಿಯುಮ್ ಪೊೞುದಿನ್ದಿ - ಶಾನ್ತವಾಗುವ ವೇಳೆಯೇ ಇಲ್ಲದೆ, ನೀರ್-ನೀವು, ಅಣಙ್ಗಾಡುದಿರ್-ಭೂತಾವಿಷ್ಟರಂತೆ ಆಡುತ್ತೀರಿ. ಇದು-ಇದು, ಪಿಣಿಯುಮ್-ಇವಳ ನೋವು, ಪೆರುಕುಮ್ ಅಲ್ಲಾಲ್ - ಹೆಚ್ಚುವಂತೆ ಮಾಡುತ್ತಿದೆಯಲ್ಲದೆ, ಒೞಿಕಿನ್ದಿಲ್ಲೈ - ಶಾನ್ತವಾಗುವುದಿಲ್ಲ. (ಆದುದರಿಂದ) ಮಣಿಯಿನ್-ನೀಲರತ್ನಕ್ಕಿಂತ, ಅಣಿ-ಅತಿ ವಿಲಕ್ಷಣವಾದ, ನಿಱಮ್-

ವರ್ಣವುಳ್ಳ, ಮಾಯರ್ - ಆಶ್ಚರ್ಯಚೇಷ್ಟಿತನಾದ ಕೃಷ್ಣನ, ತಮರ್ - ಭಕ್ತರ, ಅಡಿನೀಱು-ಪಾದಧೂಳಿಯನ್ನು, ಕೊಣ್ಡು ಅಣಿಯ-ತಂದು ಇವಳಿಗೆ ಪ್ರಯೋಗಿಸಲು, ಮುಯಲಿಲ್- ಪ್ರಯತ್ನಪಟ್ಟರೆ, ಇ ಅಣಙ್ಗುಕ್ಕು-ಈ ದಿವ್ಯಸ್ವಭಾವವುಳ್ಳ ಕನ್ಯೆಗೆ, ಮಱ್ಱು-(ಇದಕ್ಕೆ ಸಮಾನವಾದ) ಬೇರೊಂದು ಪರಿಹಾರವು, ಇಲ್ಲೈಕಣ್ಡೀರ್- ಇಲ್ಲವಷ್ಟೆ !

( ಸ-ಗಾ-ರ || )—

ಯೂಯಂ ಹನ್ತ! ವೃಥೈವ ಸನ್ತತಮಪಿ ಭ್ರಾನ್ತಾಃ ಕಿಲಾಸ್ಯಾ ರುಜಂ
ಸಂವರ್ಧ್ಯ ಶ್ರಮವತ್ಯ ಏವ ನ ಹಿ ಸನ್ತ್ಯಾಪೋಽಸ್ತಿ ಶಾನ್ತ್ಯೋಽಧುನಾ |
ದಿವ್ಯಂ ತನ್ಮಣಿವರ್ಣಮಾಯಿಭಗವತ್ಪಾದಾಬ್ಜಭಾಜಾಂ ಸತಾಂ
ಪಾದಾಂಭೋಜರಜಃ ಪ್ರಯೋಜಯತ ಭೋ ! ನಾನ್ಯದ್ಭವೇದೌಷಧಮ್ ||

ತಾ|| (ಬೇರೆ ಯಾವಚಿಕಿತ್ಸೆಯೂ ಬೇಡ; ಭಾಗವತರ ಪಾದಧೂಳಿಯೇ ಇವಳ ವ್ಯಾಧಿಗೆ ಪರಿಹಾರವೆಂದು ಹೇಳುತ್ತಾಳೆ.) ಜನನಿಯರೇ! ನೀವು ಭ್ರಾಂತಿ ವಿಷ್ಟರಂತೆ ಮಾಡುವುದೆಲ್ಲಾ ಇವಳ ರೋಗವನ್ನು ಹೆಚ್ಚಿಸುತ್ತಿದೆಯೇ ಹೊರತು ಕಮ್ಮಿ ಮಾಡುವುದಿಲ್ಲ. ಆದುದರಿಂದ ನೀಲಮಣಿವರ್ಣನಾದ ಶ್ರೀಕೃಷ್ಣನ ಭಕ್ತರ ಪಾದಧೂಳಿಯಂ ತಂದು ಇವಳಿಗೆ ಪ್ರಯೋಗಿಸಿದರೆ ಇದೇ ಪರಮೌಷಧವು. ಇದಕ್ಕೆ ಸಮಾನವಾದುದು ಬೇರೆ ಯಾವುದೂ ಇಲ್ಲವಷ್ಟೆ !.

(೭) ಅಣಙ್ಗುಕ್ಕರುಮರುನ್ದೆನ್ಱೋರಾಡುಮ್ ಕಳ್ಳುಮ್
ಪರಾಯ್,
ಶುಣಙ್ಗಱ್ಱೆಳುನ್ದು ನುಮರ್ ತೋಳ್
ಕುಲೈಕ್ಕಪ್ಪಡುಮನ್ನೈಮೀರ್,
ಉಣಙ್ಗಲ್ ಕೆಡಕ್ಕಡಿದುಮೈಯುದಟ್ಟಾಟ್ಟಿಮರ್ ಕಣ್ಣನ್ ಪಯನ್
ವಣಙ್ಗಿನರ್ ಕಳ್ ಮಾಯಪ್ಪಿರಾನ್ ತಮರ್
ವೇದಮ್ ವಲ್ಲಾರೈಯೇ.

ಪ್ರ|| ಅನ್ನೈಮೀರ್-ಜನನಿಯರೇ ! ಅಣುಙ್ಗುಕ್ಕು-ಈ ದಿವ್ಯಕನ್ಯೆಗೆ, ಅರುಮರುನ್ದು ಎನ್ಱು-ಶ್ಲಾಘ್ಯವಾದ ಚಿಕಿತ್ಸೆಯೆಂದು, ಅಙ್ಗು-ಅಲ್ಲಿ, ಓರ್ ಆಡುಮ್- ಒಂದು ಆಡನ್ನೂ, ಕಳ್ಳುಮ್-ಮದ್ಯವನ್ನೂ, ಪರಾಯ್-ಕೊಡುವುದಾಗಿ ಉದ್ದೇಶಿಸಿ ಪ್ರಾರ್ಥನೆಮಾಡಿ, ಶುಣಙ್ಗೈಎೞುನ್ದು - ರೋಮಾಂಚದೊಡನೆ, ನುಮ್

ತೋೞ್ – ನಿಮ್ಮ ತೋಳುಗಳು, ಕುಲೈಕ್ಕಪ್ಪಡುಮ್ – ಚಲಿಸಲ್ಪಡುವುವು. ಉಣಙ್ಗಲ್ – ಬಾಡಿಹೋಗುತ್ತಿರುವ ನೆಲ್ಲುಪೈರು, ಕೆಡ – ಕೆಟ್ಟುಹೋದ ಮೇಲೆ, ಕೞುದೈ-ಕತ್ತೆಯ, ಉದಡು ಆಟ್ಟುಮ್ - (ತಿನ್ನಬೇಕೆಂಬ ಆಶೆಯಿಂದುಂಟಾದ) ಅಧರಸ್ಪಂದನವನ್ನು, ಕಣ್ಡು–ಕಂಡು, ಎ಼ ಪಯ಼–ಏನು ಪ್ರಯೋಜನ? ಮಾಯಪ್ಪಿರಾ಼–ಆಶ್ಚರ್ಯಕರನಾದ ಸ್ವಾಮಿಯ, ತಮರ್-ಭಕ್ತರಾಗಿರುವ, ವೇದಮ್ ವಲ್ಲಾರೈ –. ವೈದಿಕರಾದ ಭಾಗವತರನ್ನು, ವಣಙ್ಗೀರ್‌ಕಳ್ – ನಮಸ್ಕರಿಸಿರಿ. ('ಶುಣಙ್ಗೈ'–ಎಂಬುದಕ್ಕೆ ಬದಲಾಗಿ 'ತುಣಙ್ಗೈ' ಎಂದು ಪಾಠವುಂಟು. ಅದು ಒಂದು ಲೀಲಾವಿಶೇಷವೆಂದು ಹೇಳುವರು.)

( ಸ–ಗಾ–ರ || )—

ಅಸ್ಯಾ ಔಷಧಮೇತದಿತ್ಯಪಿ ವೃಥಾ ಯೂಯಂ ಸುರಾಂ ಚಾಜಮ–
ವ್ಯುದ್ದಿಶ್ಯಾಪಿ ಭುಜಃ ದಿಚಾಲನವಶಾದಾವೇಶವಶ್ಯಾ ಇವ |
ನೃತ್ಯಂತ್ಯಃ ಕಿಮಹೋ? ಕಿಮಸ್ತಿ ತು ಫಲಂ ದೃಷ್ಟ್ವಾಽಧರಸ್ಪನ್ದನಂ ·
ವ್ರೀಹ್ಯನ್ತೇ ಬತ! ರಾಸಭಸ್ಯ? ಭಜತ ಶ್ರೀಶಂ ಶ್ರಿತಾ಼ ಶ್ರೋತ್ರಿಯಾ಼ ||

ತಾ|| (ಇತರ ದೇವತೆಗಳನ್ನು ನೀವು ಆಶ್ರಯಿಸಿದರೆ ಇವಳಿಗೆ ರೋಗಶಾನ್ತಿಯಾಗಲಾರದು. ಭಾಗವತೋತ್ತಮರನ್ನು ನಮಸ್ಕರಿಸಿದರೆ ಅವರ ಅನುಗ್ರಹದಿಂದ ಇವಳು ಬದುಕುವಳು—ಎನ್ನುತ್ತಾಳೆ.) ಜನನಿಯರೇ! ಆಡನ್ನೂ ಮದ್ಯವನ್ನೂ ಕೊಡುತ್ತೇನೆಂದು ದೇವತಾನ್ತರ ಪ್ರಾರ್ಥನೆಮಾಡಿ ನೀವು ಆಟಗಳನ್ನೆಲ್ಲಾ ಆಡಿದರೆ ಏನು ಪ್ರಯೋಜನ? ಪೈರು ಒಣಗಿಹೋದಮೇಲೆ ಕತ್ತೆಯ ಅಧರಸ್ಪಂದನದಂತೆ — ಇವಳ ಪ್ರಾಣವು ಶುಷ್ಕವಾದ ಮೇಲೆ ನಿಮ್ಮ ಆಟಗಳಿಂದ ಏನು ಪ್ರಯೋಜನ? ನಾನಾಚೇಷ್ಟಿತನಾದ ಸರ್ವೇಶ್ವರನ ಭಕ್ತರಾದ ವೈದಿಕರನ್ನು ನಮಸ್ಕರಿಸಿರಿ; ಇವಳಿಗೆ ರೋಗ ಪರಿಹಾರವಾಗುವುದು.

(೮) ವೇದಮ್ ವಲ್ಲಾರ್‌ಕಳೈ ಕ್ಕೊಣ್ಡು ವಿಣ್ಣೋರ್
ಪೆರುಮಾ಼ ತಿರು
ಪ್ಪಾದಮ್ ಪಣಿನ್ದು, ಇವಳ್ ನೋಯಿದು
ತೀರ್‌ತ್ತುಕ್ಕೊಳ್ಳಾದುಪೋಯ್,
ಏದಮ್ ಪಱೈನ್ದಲ್ಲ ಶೆಯ್ದು ಕಳ್ಳೂಡು ಕಲಾಯ್ ತೂಯ್
ಕೇಡಮುೞವಿಟ್ಟು ನೀರ್ ಣಙ್ಗಾಡುದಲ್ ಕೇತ್ತೈಯೋ.

ಪ್ರ|| ವೇದವ್ವಲ್ಲಾರ್‌ಕಳ್ಳೈ-ವೇದವಿತ್ತಮರಾದ ಭಾಗವತರನ್ನು, ಕೊಣ್ಡು-ಆಶ್ರಯಿಸಿ, (ಅವರ ಮೂಲಕ) ವಿಣ್ಣೋರ್‌ಪೆರುಮಾ-ನಿತ್ಯಸೂರಿ ಸೇವ್ಯನಾದ ಸರ್ವೇಶ್ವರನ, ತಿರುಪ್ಪಾದಮ್-ಭೋಗ್ಯವಾದ ಚರಣಯುಗಳವನ್ನು, ಪಣಿನ್ದು-ನಮಸ್ಕರಿಸಿ, ಇವಳ್ - ಇವಳ, ಇದುನೋಯ್-ಈ ವ್ಯಾಧಿಯನ್ನು, ತೀರ್‌ತ್ತು ಕ್ಕೊಳ್ಳಾದು - ಪರಿಹರಿಸಿಕ್ಕೊಳ್ಳದೆ, ಪೋಯ್ - ಇತರ ದೇವತಾಪ್ರಾರ್ಥನೆಗಾಗಿ ಹೋಗಿ, ಏದಮ್ ಪಕ್ಕ್ಯನ್ದು-ಆ ಕ್ಷುದ್ರ ದೇವತಾಸ್ತುತಿಯಂ ಮಾಡಿ, ಅಲ್ಲಶೆಯ್ದು-ಅಕೃತ್ಯಗಳನ್ನೆಲ್ಲಾ ಆಚರಿಸಿ, ಊಡು-ನಡುವೆ, ಕಳ್‌ಕಲಾಯ್-ಮದ್ಯವನ್ನು ಕಲಸಿ, ತೂಯ್-ಆ ಸಾಮಗ್ರಿಗಳನ್ನೆಲ್ಲಾ ಚೆಲ್ಲಿ, ಕೀದಮ್ ಮುೞವುಇಟ್ಟು - ಗೀತಗಳಿಗೆ ತಕ್ಕ ವಾದ್ಯಘೋಷವಂ ಮಾಡಿ, ನೀರ್-ನೀವುಗಳು, ಅಣಙ್ಗು ಆಡುದಲ್-ದೈವಾವೇಶದಿಂದ ಆಡೋಣವು, ಕೀೞ್ಮೈಯೇ-(ಈ ವಂಶಕ್ಕೆ) ಅವದ್ಯಕರವೇ ಆಗುವುದು.

( ಸ-ಗಾ-ರ || )—

ವೇದಾರ್ಥಜ್ಞಮುಖಾತ್ಪ್ರಪದ್ಯ ಚರಣಾಮ್ಭೋಜದ್ವಯಂ ಶ್ರೀಪತೇ-
ಸ್ಸೂರೀಣಾಮಪಿ ನಾಯಕಸ್ಯ ತು ಹರೇರ್ದ್ರೋಗಂ ಕಿಲಾಸ್ಯಾಃ ಕ್ಷಣಾತ್ |
ಏವಂ ಹನ್ತ! ನ ಕುರ್ವತೇ ಕಿಲ ಜನಾ ಯುಷ್ಮಾದೃಶಾ ದೇವತಾ
ವಾದ್ಯೈರ್ಮದ್ಯಯುತಾರ್ಪಣೈರುಪಚರನ್ತ್ಯೇವೇತ್ಯವಜ್ಞಾ ಹಿ ವಃ ||

ತಾ|| (ಭಾಗವತರ ಮೂಲಕ ಸರ್ವೇಶ್ವರನ ಪಾದಗಳನ್ನು ಭಜಿಸದೆ, ಕ್ಷುದ್ರ ದೇವತಾ ಪೂಜೆಯಂ ಮಾಡೋಣವು ನಿಮ್ಮ ಈ ವಂಶಕ್ಕೆ ಅವದ್ಯಕರವೆಂದು—ಹೇಳುತ್ತಾಳೆ.) ವೇದವಿತ್ತಮರಾದ ಭಾಗವತರ ಮೂಲಕ ಸರ್ವೇಶ್ವರನ ಪಾದಗಳನ್ನು ನಮಸ್ಕರಿಸಿ ಇವಳ ರೋಗಶಾನ್ತಿಯಂ ಪಡೆಯುವುದಕ್ಕೆ ಬದಲಾಗಿ, ನೀವು ಕ್ಷುದ್ರದೇವತಾಸ್ತುತಿಯಂ ಮಾಡಿ, ಮದ್ಯಾದಿಗಳನ್ನೆಲ್ಲಾ ಚೆಲ್ಲಿ, ಗೀತವಾದ್ಯ ಘೋಷವಂ ಮಾಡಿ, ಆ ವೇಶದಿಂದ ಆಡೋಣವು ನಿಮ್ಮ ಈ ವಂಶಕ್ಕೇ ಅನರ್ಥಕರವು.

(೯) ಕೀೞ್ಮೈಯಿನಾಲಙ್ಗೋರ್ ಕೀೞ್ಮೆಕನಿಟ್ಟಮುೞವಿೞ್ ಕೀೞ್,
ನಾೞ್ಮೈ ಪಲಶೊಲ್ಲಿ ನೀರಣಙ್ಗಾಡುಮಾ ಪೊಯ್
ಕಾಣ್ಕಿಲೆನ್,
ಏೞ್ಮೈ ಪ್ಪಿಱಪ್ಪುಕ್ಕುಮ್ ಶೇಮಮಿನ್ನೋಯ್‌ಕ್ಕುಮಿಾದೇ
ಮರುನ್ದು,
ಊೞ್ಮೈಯಿಲ್ ಕಣ್ಣಪಿರಾನ್ ಕೞಲ್ ವಾೞ್ತ್ತುಮಿ
ನುನ್ನಿತ್ತೇ.

ಪ್ರ॥ ಕೀೞ್ಮೈಯಿನಾಲ್-ನಿಕರ್ಷದಿಂದ, ಅಙ್ಗೋರ್ ಕೀೞ್ಮಕನ್-ಯಾವನೋ ಒಬ್ಬ ನೀಚನು, ಇಟ್ಟ-ಮಾಡಿದ, ಮುೞವಿನ್‌ಕೀೞ್ ವಾದ್ಯಘೋಷವನ್ನು ಅನುಸರಿಸಿ, ನಾೞ್ಮೈಪಲ - ದೇವತಾನ್ತರೋತ್ಕರ್ಷವನ್ನು ಶ್ಲಾಘಿಸಿ ಅನೇಕಪ್ರಕಾರಗಳಿಂದ, ಶೊಲ್ಲಿ-ಹಾಡುಗಳಂ ಹೇಳಿ, ನೀರ್-ನೀವು, ಅಣಙ್ಗು ಆಡುಮ್-ದೈವಾವಿಷ್ಟರಾಗಿ ಆಡುವ, ಪೊಯ್-ನಿಷ್ಫಲವಾದ ಕಾರ್ಯಗಳನ್ನು, ಕಾಣ್‌ಕಿಲೇನ್ - ನೋಡಲಾರೆನು. ಏೞ್ಮೈಪ್ಪಿಱಪ್ಪುಕ್ಕುಮ್-ಸಕಲ ಜನ್ಮಗಳಿಗೂ, ಶೇಮಮ್-ಕ್ಷೇಮವಾಗಿರುವ, ಈದೇ -ಇದೇ, ಇನ್ನೋಯ್ಕ್ಕುಮರುನ್ದು-ಈ ವ್ಯಾಧಿಗೆ ಔಷಧವು. ಊೞ್ಮೈಯಿಲ್-ಅನಾದಿ ಪದ್ಧತಿಯಂತೆ, ಕಣ್ಣಪಿರಾನ್ - ಶ್ರೀ ಕೃಷ್ಣಸ್ವಾಮಿಯ, ಕೞಲ್ - ಪಾದಗಳನ್ನು, ಉನ್ನಿತ್ತು-ಅನುಸನ್ಧಿಸಿ, ವಾೞ್ತ್ತುಮಿನ್-ಮಂಗಳಾಶಾಸನ ಮಾಡಿರಿ.

( ಸ-ಗಾ-ರ ॥ )—

ಕ್ಷುದ್ರೈಃ ಕಲ್ಪಿತಮೇವ ವಾದ್ಯನಿಚಯಂ ಸಂಶಬ್ದ್ಯ ಚ ಸ್ತೋತ್ರತಃ
ಕ್ಷುದ್ರಾವೇಶಯುತಾಸ್ತು ಯೂಯಮಿತಿ ಯದ್ದ್ರಷ್ಟುಂ ನ ಶಕ್ಯಂ ಮಯಾ।
ಕ್ಷೇಮಂ ಸಪ್ತಕುಲಾನ್ವಯಾದಪಿ ಪರಂ ದಿವ್ಯೌಷಧಂ ಪ್ರಾಕ್ತನಂ
ತಚ್ಛೇದಂ ಕುರುತಾಂಘ್ರಿಪಂಕಜಯುಗಂ ಕೃಷ್ಣಸ್ಯ ನತ್ವಾ ಸದಾ ॥

ತಾ॥ (ನಿಮ್ಮ ನಿಷ್ಪ್ರಯೋಜನವಾದ ಈ ಕಾರ್ಯಗಳನ್ನು ನಾನು ಕಣ್ಣಿನಿಂದ ನೋಡಲಾರೆನು. ಶ್ರೀಕೃಷ್ಣನ ಪಾದಾರವಿನ್ದಗಳನ್ನು ಸ್ತುತಿಸಿದರೆ ಇವಳು ಬದುಕುವಳು—ಎನ್ನುತ್ತಾಳೆ.) ಯಾವನೋ ಒಬ್ಬ ನಿಕೃಷ್ಟನಾದ ಚಂಡಾಲನಿಂದ ಮಾಡಲ್ಪಟ್ಟ ವಾದ್ಯಘೋಷವನ್ನು ಅನುಸರಿಸಿ ಕ್ಷುದ್ರದೇವತೆಗಳನ್ನು ಹಾಡಿ ನೀವು ನರ್ತನಮಾಡುವ ಈ ನಿಷ್ಫಲವಾದ ಕಾರ್ಯಗಳನ್ನು ನಾನು ನೋಡಲಾರೆನು. ಇವಳ ವ್ಯಾಧಿಗೆ ದಿವ್ಯೌಷಧವು ಶ್ರೀಕೃಷ್ಣನ ಪಾದಾರವಿನ್ದ ಸ್ತುತಿಯೇ! ಆದುದರಿಂದ ಇದನ್ನೇ ಮಾಡಿರಿ.

(೧೦) ಉನ್ನಿತ್ತು ಮಱ್ಱೊರು ದೆಯ್ವಮ್ ತೊೞಾಳವನ್ನೈ
ಯಲ್ಲಾಲ್,
ನುಮ್ಮಿಚ್ಚೈ ಶೊಲ್ಲಿ ನುಮ್‌ತೋಳ್
ಕುಲೈಕ್ಕಪ್ಪಡುಮನ್ನೈಮೀರ್,
ಮನ್ನಪ್ಪಡುಮ್ ಮಱೈವಾಣನೈ ವಣ್‌ತುವರಾಪತಿ
ಮನ್ನನೈ, ಏತ್ತುಮಿನೇತ್ತುದಲುಮ್ ತೊೞುದಾಡುಮೇ

ಪ್ರ|| ಅವನ್ನೈ ಯಲ್ಲಾಲ್-ಅವನನ್ನು ಬಿಟ್ಟರೆ, ಮತ್ತು ಒರುದೆಯ್ವಮ್-ಬೇರೆ ಒಂದು ದೇವತೆಯನ್ನು, ಉನ್ನಿತ್ತು-ನೆನೆದು, ತೊೞ್ಱಾಳ್-ಸೇವಿಸುವವಳಲ್ಲ. ಅನ್ನೈಯಿರ್-ಜನನಿಯರೇ,! ನುಮ್ ಇಚ್ಚೈ- ನಿಮ್ಮ ಇಷ್ಟಗಳನ್ನು, ಶೊಲ್ಲಿ-ಹೇಳಿ, ನುಮ್‌ತೋಳ್-ನಿಮ್ಮ ತೋಳುಗಳು, ಕುಲೈಕ್ಕ-ಚಲಿಸಲು (ದೇವತಾನ್ತರ ಪರವಾಗಿ ಕೆಲಸಮಾಡಲು); ಪಡುಮ್ - ಉಪಯೋಗಿಸಲ್ಪಡುವುವು. (ಅದನ್ನು ಬಿಟ್ಟು) ಮನ್ನ - ನಿತ್ಯವಾಗಿ, ಪಡುಮ್ - (ಮನಸ್ಸಿನಲ್ಲಿ) ಸ್ಮರಿಸಲ್ಪಡುವ, ಮತ್ತು ವಾಣನ್ನೈ - ವೇದಪ್ರತಿಪಾದ್ಯನಾದ ಸ್ವಾಮಿಯನ್ನು, ವಣ್ತುವರಾಪತಿಮನ್ನನೈ-ಶ್ರೀಮದ್ದ್ವಾರಕಾಧೀಶನಾದ ಕೃಷ್ಣನನ್ನು, ಏತ್ತುಮಿನ್-ಸ್ತೋತ್ರಮಾಡಿರಿ. ಏತ್ತುದಲುಮ್ - ನೀವು ಸ್ತೋತ್ರಮಾಡುವಾಗಲೇ (ಇವಳು ಎದ್ದು), ತೊೞುದು-ಅವನನ್ನೇ ಸೇವಿಸಿ, ಆಡುಮ್-ಸಂಭ್ರಮದೊಡನೆ ನರ್ತನಮಾಡುವಳು.

( ಸ ಗಾ-ರ || )—

ನಾನ್ಯದ್ದೈವಮಿಯಂ ಸ್ಮರೇದುಪಚರೇತ್ ಕೃಷ್ಣಾತ್ಪರಂ ಶ್ರೀಪತೇ-
ರ್ಯೂಯಂ ಸ್ವಾಭಿಮತಂ ಪ್ರಜಲ್ಪ್ಯ ಚ ಭುಜಾನ್ ಸ್ವೈರಂ
ಪ್ರಚಾಲ್ಯಾಪಿ ವಃ |
ಯತ್ನಾನೇವ ವೃಥಾ ಶ್ರಿತಾಃ ಕಿಲ ಪರಿತ್ಯಜ್ಯೇದಮುದ್ಯೋಗವ-
ರ್ವೇದ್ಯಂ ದ್ವಾರವತೀಪತಿಂ ಸ್ತುತ! ನುತೇಽಸ್ಮಿನ್ನಿಯಂ ಪರಂ ನೃತ್ಯತಿ ||

ತಾ|| (ಇವಳಿಗೆ ಕೃಷ್ಣನ ಚರಣಗಳಲ್ಲೇ ಆಸಕ್ತಿ ಯೆಂಬುದನ್ನು ತಿಳಿದು ನೀವು ಅವನನ್ನೇ ಸ್ತೋತ್ರಮಾಡಿರಿ; ಇವಳು ಒಡನೇ ಉಜ್ಜೀವಿತೆಯಾಗುವಳು-ಎನ್ನುತ್ತಾಳೆ.) ಅವನನ್ನು ಬಿಟ್ಟು ಮತ್ತೊಂದು ದೇವತೆಯನ್ನು ಇವಳು ಸೇವಿಸುವವಳಲ್ಲ. ಜನನಿಯರಾದ ನೀವು ವೃಥಾ ನಿಮ್ಮ ಇಷ್ಟಗಳನ್ನೆಲ್ಲಾ ಹೇಳಿಕೊಂಡು ದೇವತಾನ್ತರಪರರಾಗಿ ಏನೋ ಕಾರ್ಯಗಳನ್ನೆಲ್ಲಾ (ನಿಮ್ಮ ತೋಳುಗಳಿಂದ ಮಾಡುತ್ತೀರಿ. (ಅದನ್ನು ಬಿಟ್ಟು) ನಿತ್ಯಧ್ಯೇಯನಾದ ವೇದಪ್ರತಿಪಾದ್ಯನಾದ ಶ್ರೀ ದ್ವಾರಕಾಧೀಶ್ವರನನ್ನು ಸ್ತೋತ್ರಮಾಡಿರಿ; ಇವಳು ತಕ್ಷಣದಲ್ಲೇ ಎದ್ದು ಅವನನ್ನೇ ನಮಸ್ಕರಿಸಿ ನರ್ತನಮಾಡುವಳು.

(೧೧) ತೊೞುದಾಡಿ ತ್ತೂಮಣಿವಣ್ಣನುಕ್ಕಾಳ್ಚೆಯ್ದು
ನೋಯ್ ತೀರ್ನ್ದ,
ವೞುವಾದ ತೊಲ್‌ಪುಕೞ್ ವಣ್‌ಕುರುಕೂರ್‌ಚ್ಚಡಕೋಪನ್,
ಶೊಲ್
ವೞುವಾದನಾಯಿರತ್ತುಳ್ಳಿವೈಪತ್ತು ಮೆೞಿಕಳುಮ್,
ತೊೞುದಾಡಿ ಪ್ಪಾಡವಲ್ಲಾರ್ ತುಕ್ಕಶೀಲಮಿಲರ್‌ಕಳೇ.

ಪ್ರ|| ತೊೞುದು-ಅಂಜಲಿಮಾಡಿ, ಆಡಿ – ನರ್ತನಮಾಡಿ, ತೂಮಣಿವಣ್ಣನುಕ್ಕು – ಉಜ್ಜ್ವಲವಾದ ನೀಲಮಣಿಯಂತೆ ಶರೀರಕಾನ್ತಿಯುಳ್ಳ ಕೃಷ್ಣನಿಗೆ, ಆಳ್‌ಶೆಯ್ದು – ವಾಚಿಕಕೈಂಕರ್ಯವನ್ನು ಮಾಡಿ, ನೋಯ್‌ತೀರ್‌ನ್ದ-ವಿರಹವ್ಯಾಧಿಶಾನ್ತಿಯಂ ಪಡೆದ, ವೞುವಾದ-ನಿರ್ದೋಷವಾದ, ತೊಲ್‌ಪುಕೞ್-ಸ್ವಾಭಾವಿಕ ಭಗವತ್ಪಾವಣ್ಯಶೀಲವೆಂಬ ಪ್ರಸಿದ್ಧಿಯುಳ್ಳ, ವಣ್‌ಕುರುಕೂರ್ ಶಡಕೋಪನ್ – ವಿಲಕ್ಷಣವಾದ ಕುರುಕಾಪುರಿಗೆ ನಿರ್ವಾಹಕರಾದ ನಮ್ಮಾೞ್ವಾರ್ರು, ಶೊಲ್-ಹೇಳಿದ (ರಚಿಸಿದ), ವೞುವಾದ – (ಭಗವದ್ಗುಣಗಳ) ಚ್ಯುತಿಯಿಲ್ಲದ, ಆಯಿರತ್ತುಳ್ – ಸಹಸ್ರಪದ್ಯಮಾಲಿಯೊಳು, ವೇಱಿಕಳುಮ್-ದೇವತಾನ್ತರ ಭಜನನಿಷೇಧಪರವಾದ, ಇವ್ವೈಪತ್ತುಮ್-ಈ ದಶಕವನ್ನು, ತೊೞುದು – ಸೇವಿಸಿ, ಆಡಿ-ನರ್ತನಮಾಡಿ, ಪಾಡವಲ್ಲಾರ್-ಗಾನಮಾಡಬಲ್ಲವರು, ತುಕ್ಕಶೀಲಮಿಲರ್‌ಕಳ್ – ದುಃಖಪಡುವ ಸ್ವಭಾವವಿಲ್ಲದವರಾಗಿ ಸುಖವಂ ಪಡೆಯುವರು.

( ಸ-ಗಾ-ರ || )—

ನತ್ವಾ ಶ್ರೀಮಣಿವರ್ಣಮೇವ ಸತತಂ ನೃತ್ಯನ್ನಿಷು ಸಕ್ತೋ ಹರಿಂ
ಪ್ರಾಪ್ಯ ಧ್ವಸ್ತಸಮಸ್ತರೋಗಸರಣಿಃ ಖ್ಯಾತಶ್ಶಠಾರಿರ್ಮುನಿಃ |
ದಿವ್ಯಾಂ ಚಾಹ ಸಹಸ್ರಪದ್ಯಸರಣಿಂ ದುರ್ದೇವತಾವೇಶನುತ್
ತತ್ರೇದಂ ದಶಕಂ ಪಠನ್ತಿ ಯದಿ ತೇ ನಿರ್ದುಃಖಗೆನ್ತಾಸ್ಸ್ವಯಮ್ ||

ತಾ|| (ಈ ದಶಕವನ್ನು ಸಹೃದಯರಾಗಿ ಪಠನಮಾಡಬಲ್ಲವರು ನಿರ್ದುಃಖಗನ್ತರಾಗುವರೆಂದು ಹೇಳುತ್ತಾರೆ.) ಸಾಂಜಲಿಬನ್ಧರಾಗಿ ನರ್ತನಮಾಡುತ್ತ ಶ್ರೀಕೃಷ್ಣನಿಗೆ ವಾಚಿಕ ಕೈಂಕರ್ಯರೂಪವಾಗಿ ಶ್ರೀ ಶಠಾರಿಮುನಿವರ್ಯರು ರಚಿಸಿದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಸಂಭ್ರಮದೊಡನೆ ಗಾನಮಾಡಬಲ್ಲವರು (ದೇವತಾನ್ತರ ಭಜನದಿಂದ ಉಂಟಾಗುವ) ದುಃಖಗಳಿಂದ ರಹಿತರಾಗಿ ಬಾಳುವರು.

( ದ್ರ-ಉ-ಸಂ || )—

ಸ್ವಪ್ನೋಪಮಾದನುಭವಾದಮುತೋಽಪ್ಯಲಬ್ಧ-
ಸ್ವಾಪೇಕ್ಷಿತೇ ಶಠಜಿತಿ ವ್ಯಸನಾದ್ವಿಸಂಜ್ಞೇ |
ಯೇ ಕ್ಷುದ್ರದೇವಮುಖತಃ ಪರಿಹರ್ತುಕಾಮಾ-
ಸ್ತೇ ವಾರಿತಾಸ್ತದುಚಿತಜ್ಞ ಗಿರೈವ ಷಷ್ಠೇ ||

( ದ್ರ–ಉ–ತಾ–ರ ॥ )—

ಇಚ್ಛಾಸಾರಥ್ಯಯೋಗಾತ್ಪ್ರಹರಣನವನಾಚ್ಛಿತ್ರಿತುಲಸ್ಯಾಢ್ಯಮೌಳೇ-
ಸ್ಸ್ಮೃತ್ಯಾಂಘ್ರ್ಯೋಃ ಪಾದಧೂಳ್ಯಾ ಸ್ವಜನಭಜನತತ್ಪಾದಧೂಳೀನಮೋಭಿಃ।
ತನ್ಮೂಲಸ್ಯಾಂಘ್ರಿನುತ್ಯಾ ತದಿತರಭಜನತ್ಯಾಗಪೂರ್ವೋಪಸತ್ತ್ಯಾ
ದೇವಂ ಪ್ರಾಚಿಖ್ಯಪತ್ ಸ್ವಪ್ರಣಯಿಷು ಭಿಷಜಂ ಶೇಸರಸ್ರಗ್ವಿಭೂಷಃ ॥

(ಈ ಷಷ್ಠದಶಕದ ಸಾರಾಂಶ)—

ಈ ಆರನೆಯದಶಕದಲ್ಲಿ — ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ಮೋಹಿತರಾಗಿರುವಲ್ಲಿ ನಾಯಿಕಾಜನನಿಯರು ಕ್ಷುದ್ರದೇವತಾಭಜನವಂ ಮಾಡಿ ಅವಳ ರೋಗಪಂಹಾರಕ್ಕೆ ಪ್ರಯತ್ನಪಡುವುದನ್ನು ಕಂಡು ಆ ನಾಯಕಿಯ ಸಖಿಯು ಅವರ ವೃಥಾಶ್ರಮವನ್ನೂ ಅಕಾರ್ಯಪ್ರವೃತ್ತಿಯನ್ನೂ ನಿವಾರಣಮಾಡಿ, ಶ್ರೀ ಭಗವನ್ನಾಮಸಂಕೀರ್ತನ - ಭಾಗವತಪಾದಧೂಳೀಪ್ರಯೋಗ - ಮುಂತಾದ ಕಾರ್ಯಗಳನ್ನು ಮಾಡಿದರೆ ಇವಳಿಗೆ ರೋಗ ಶಾನ್ತಿಯಾಗುವುದೆಂದು ಹೇಳುತ್ತಾಳೆ.

---

ಶ್ರೀಃ

# ಚತುರ್ಥ ಶತಕದಲ್ಲಿ—ಸಪ್ತಮದಶಕ.

## (ಶೀಲಮಿಲ್ಲಾಚ್ಚಿಱಿಯನೇಲುಮ್—)

(ಈ ದಶಕದಲ್ಲಿ — ಶ್ರೀ ಶಠಾರಿಮುನಿವರ್ಯರು ಮೋಹಶಾನ್ತಿಯಂ ಪಡೆದು ಶ್ರೀ ಭಗವನ್ತನ ದಿವ್ಯಮಂಗಳವಿಗ್ರಹದರ್ಶನಕ್ಕಾಗಿ ಅಹೋರಾತ್ರ ಮೊರೆಯಿಡುತ್ತಾರೆ.)

(೧) ಶೀಲಮಿಲ್ಲಾಚ್ಚಿಱಿಯನೇಲುಮ್ ಶೆಯ್‌ವಿನೈಯೋ
ಪೆರಿದಾಲ್,
ಞಾಲಮುಣ್ಡಾಯ್ ಞಾನಮೂರ್ತೀ ನಾರಾಯಣಾವೆನ್‌ಱೆನ್ಱು,
ಕಾಲಮಾತ್ತೋಱುಮ್ ಯಾನಿರುನ್ದು ಕೈತಲೈ
ಪೂಶಲಿಟ್ಟಾಲ್,
ಕೋಲಮೇನಿ ಕಾಣವಾರಾಯ್ ಕೂವಿಯುಮ್
ಕೊಳ್ಳಾಯೇ.

ಪ್ರ|| ಞಾಲಮ್-ಪ್ರಪಂಚವನ್ನೆಲ್ಲಾ, ಉಣ್ಡಾಯ್-ಭಕ್ಷಿಸಿ ಉದರದಲ್ಲಿಟ್ಟು ರಕ್ಷಿಸಿದವನೇ! ಞಾನಮೂರ್ತೀ-ದಿವ್ಯಜ್ಞಾನಮೂರ್ತಿಯೇ!, ನಾರಾಯಣಾ-ಸರ್ವ ವಸ್ತುಗಳಿಗೂ ಆಧಾರಭೂತನಾದ ನಾರಾಯಣನೇ!, ಎನ್ರು ಎನ್ರು-ಎಂದು ಅನೇಕಾವೃತ್ತಿ ನಿನ್ನ ಗುಣಗಳನ್ನು ಹೇಳಿಹೇಳಿ, ಕಾಲಮ್ತೋಱುಮ್-ಸರ್ವಕಾಲದಲ್ಲೂ, ಯಾ಼ - ನಾನು, ಇರುನ್ದು - (ನಿನ್ನನ್ನು ಕಾಣಬೇಕೆಂಬ ಆಶೆಯಿಂದ) ಬಂದು, ಕೈತಲೈಪೂಶಲಿಟ್ಟಾಲ್-(ಕೈಯನ್ನು ತಲೆಯಲ್ಲಿಟ್ಟು) ಮಹಾಧ್ವನಿಯೊಡನೆ ಕೂಗಿದರೆ, ಕೋಲಮೇನಿ-ದರ್ಶನೀಯವಾದ ನಿನ್ನ ದಿವ್ಯಶರೀರವನ್ನು, ಕಾಣ-ನಾನು ಕಂಡು ಅನುಭವಿಸುವಂತೆ, ವಾರಾಯ್-ನೀನೂ ಬರುವುದಿಲ್ಲ. ಕೂವಿಯುಮ್ಕೊಳ್ಳಾಯ್ -ನನ್ನನ್ನು ನಿನ್ನ ಬಳಿಗೆ ಕರೆದುಕೊಳ್ಳುವುದೂ ಇಲ್ಲ. (ಆದುದರಿಂದ) ಶೀಲಮಿಲ್ಲಾ ಶಿಱಿಯನೇಲುಮ್-(ನಾನು) ಒಳ್ಳೇ ಶೀಲವಿಲ್ಲದ ಅಜ್ಞನಾದ ಕ್ಷುದ್ರಚೇತನನಾಗಿದ್ದರೂ, ಶೆಯ್ವಿನೈಯೋ! - ಮಾಡಿದ ಪಾಪವೋ, ಪೆರಿದಾಲ್-ಅತ್ಯಧಿಕವಾದುದಲ್ಲವೇ !

( ಸ-ಗಾ-ರ || )—

**ಲೋಕಾನಾಮಸಿ ರಕ್ಷಕಸ್ತ್ವಮನಿಶಂ ಜ್ಞಾನಸ್ವರೂಪೋ ಹರಿ-**
**ರ್ಹೇ! ನಾರಾಯಣ! ಮಾಧವೇತಿ ಸತತಂ ತ್ವಾಮೇವ ಸಂಕೀರ್ತಯನ್ |**
**ದ್ರಷ್ಟುಂ ಸುನ್ದರಮೂರ್ತಿಮೇವ ಹಿ ತವ ಶ್ರೀನಾಥ! ಕಾಂಕ್ಷೇ ಸದಾ**
**ನಾಯಾಸಿ ತ್ವಮಹೋ! ನ ಮಾಂ ನಯಸಿ ಚೇತ್ ಕ್ಷುದ್ರಸ್ಯ ಮೇಽಘಂ**
**ಮಹತ್ ||**

ತಾ|| (ಎಷ್ಟು ಸಲ ಎಷ್ಟು ಕಾಲದವರೆಗೆ ಕೂಗಿದಾಗ್ಯೂ ನೀನು ನನ್ನನ್ನು ಅಂಗೀಕರಿಸದೆ ಇರುವಂತೆ ನಾನು ಮಾಡಿದ ಮಹಾಪಾಪದ ಆಧಿಕ್ಯವನ್ನು ಏನೆಂದು ಹೇಳಲಿ ?—ಎನ್ನುತ್ತಾರೆ.) 'ಸರ್ವಲೋಕೋಪಕಾರಕನಾದ ಸ್ವಾಮಿಯೇ! ಜ್ಞಾನಮೂರ್ತಿಯೇ! ನಾರಾಯಣನೇ!' ಎಂದು ನಾನು ಅನೇಕಾವೃತ್ತಿ ಮಹಾಧ್ವನಿಯಿಂದ ಕೂಗಿದಾಗ್ಯೂ ನೀನು ಬರುವುದೂ ಇಲ್ಲ, ನನ್ನನ್ನು ನಿನ್ನ ಬಳಿಗೆ ಕರೆದುಕೊಳ್ಳುವುದೂ ಇಲ್ಲ. ನಾನು ಶೀಲವಿಲ್ಲದ ಅಲ್ಪನಾಗಿದ್ದಾಗ್ಯೂ ನಾನು ಮಾಡಿರುವ ಪಾಪವು ಅಪಾರವಾಗಿರುವುದು ! ಆಶ್ಚರ್ಯ !

(೨) ಕೊಳ್ಳಮಾಳಾ ವಿನ್ಬವೆಳ್ಳಮೇ ಕೋದಿಲ ತನ್ದಿಡುಮೇ, ಎನ್
ವಳ್ಳಲೇಯೋ ವೈಯಮ್ ಕೊಣ್ಡ ವಾಮನಾವೋ ಎನ್ಱೆನ್ಱು,
ನಳ್ಳಿರಾವುಮ್ ನನ್ಪಕಲುಮ್ ನಾನಿರುನ್ದೋಲಮಿಟ್ಟಾಲ್,
ಕಳ್ಳಮಾಯಾ ವುನ್ನೈಯೆನ್ ಕಣ್ ಕಾಣ ವನ್ದೀಯಾಯೇ.

ಪ್ರ॥ ವೈಯಮ್-ಭೂಮಿಯನ್ನು, ಕೊಣ್ಡ-ಆಳಿದುಕೊಂಡ, ವಾಮನಾವೋ-ವಾಮನನೇ!, ಕೊಳ್ಳ-ಅನುಭವಿಸಿ ಅನುಭವಿಸಿ, ಮಾಳಾ-ಎಲ್ಲೆ ಕಾಣದಂತಿರುವ, ಇನ್ಬವೆಳ್ಳಮ್-ಆನನ್ದಸಮುದ್ರವನ್ನು, ಕೋದು ಇಲ-ದೋಷವಿಲ್ಲದಂತೆ, ತನ್ದಿಡುಮ್-ನನಗೆ ಉಂಟುಮಾಡುವ, ಎನ್‌ವಳ್ಳಲೇಯೋ - ನನ್ನ ಮಹೋದಾರಶೀಲನಾದ ಸ್ವಾಮಿಯೇ, ಎನ್ಱು ಎನ್ಱು-ಎಂದು ಎಂದು ಹೇಳಿ, ನಳ್ ಇರಾವುಮ್-ಮಧ್ಯರಾತ್ರಿಯಲ್ಲೂ, ನನ್‌ಪಕಲುಮ್-(ಸರ್ವಪ್ರಕಾಶಕವಾದ) ಒಳ್ಳೇ ಹಗಲಿನಲ್ಲೂ, ನಾನ್-ನಾನು, ಇರುನ್ದು-(ಅನ್ಯಕಾರ್ಯಸಕ್ತಿಯಿಲ್ಲದೆ) ಇದ್ದು, ಓಲಮಿಟ್ಟಾಲ್-ಉದ್ಘೋಷಿಸಿದರೆ, ಕಳ್ಳಮ್‌ಮಾಯಾ-ಕೃತ್ರಿಮನಂತೆ ಮಾಯಾಮಯನಾದ ಅನ್ತರಾತ್ಮನೇ!, ಉನ್ನೈ-ನಿನ್ನನ್ನು, ಎನ್ ಕಣ್‌ಕಾಣ-ನನ್ನ ಕಣ್ಣುಗಳು ಕಾಣುವಂತೆ, ವನ್ದು ಈಯಾಯ್-ಬಂದು (ನನಗೆ) ತರುವುದಿಲ್ಲ. (ಓ-ಅಯ್ಯೋ! ಏನುಮಾಡಲಿ?—ಎಂದೂ ಅರ್ಥವಾಗಬಹುದು.)

( ಸ-ಗಾ-ರೆ ॥ )—

**ಮಾತುಂ ಭೂಮಿತಲಂ ಹಿ ವಾಮನವಪುಸ್ತ್ವಂ ಮಾಮುದಾರಾಶಯ-**
**ಸ್ತ್ವನನ್ದಾಮೃತವಾರಿಧೌ ಚ ಕುರುಷೇ ಮಗ್ನಂ ಮಹಾನಿತ್ಯಹಮ್ ।**
**ಏವಂ ಹನ್ತ! ದಿವಾನಿಶಂ ಚ ಸತತಂ ತ್ವಾಮೇವ ಸಂಕೀರ್ತಯೇ**
**ಮಾಯಾಮೂರ್ತಿರಹೋ! ನ ಮೇ ನಯನಯೋರ್ದ್ರಷ್ಟುಂ ಹಿ ಪಾತ್ರಂ ಭವಾನ್ ॥**

ತಾ॥ (ನಿನ್ನ ಮಹೌದಾರ್ಯವನ್ನು ಶ್ಲಾಘಿಸಿ ನಾನು ಎಷ್ಟುಕೂಗಿದಾಗ್ಯೂ ನೀನು ಪ್ರತ್ಯಕ್ಷನಾಗಿ ನಿನ್ನನ್ನು ನನಗೆ ತರುವುದಿಲ್ಲ—ಏನುಮಾಡಲಿ?—ಎನ್ನುತ್ತಾರೆ.) "ಸರ್ವಲೋಕವನ್ನೂ ಆಳಿದು ವಶೀಕರಿಸಿದ ವಾಮನನೇ! ಅಪಾರವಾದ ಆನನ್ದಸಮುದ್ರವನ್ನು ನನಗೆ ಉಂಟುಮಾಡುವ ಮಹೋದಾರಸ್ವಭಾವನೇ!"—ಎಂದು ನಾನು ರಾತ್ರಿಯೂ ಹಗಲೂ ಏಕಪ್ರಕಾರ ಮೊರೆಯಿಟ್ಟರೂ ನೀನು ಒಳಗೆ (ಅನ್ತರಾತ್ಮನಾಗಿ) ಕೃತ್ರಿಮನಂತೆ ಮಾಯಾವಿಯಾಗಿ ಮರೆಸಿಕೊಂಡು ಇರುತ್ತೀಯೆ

ನನ್ನ ಕಣ್ಣೆದುರಿಗೆ ಬಂದು ನಿನ್ನನ್ನು ನನಗೆ ಅನುಗ್ರಹಿಸುವುದಿಲ್ಲ. ಇದಕ್ಕೆ ನಾನೇನು ಮಾಡಲಿ?—ಎಂದು ತಾತ್ಪರ್ಯ.

(೩) ಈವಿಲಾದ ತೀವಿನೈಕಳೆತ್ತನೈ ಶೆಯ್ದನ್‌ಕೊಲ್,
ತಾವಿ ವೈಯಮ್‌ಕೊಣ್ಡವೆನ್ದಾಯ್ ತಾಮೋದರಾವೆನ್ರೆನ್ರು,
ಕೂವಿಕ್ಕೂವಿ ನೆಞ್ಜುರುಕಿ ಕ್ಕಣ್‌ಪನಿ ಶೋರ ನಿನ್ರಾಲ್,
ಪಾವಿನೀಯೆನ್ರೊನ್ರು ಶೊಲ್ಲಾಯ್ ಪಾವಿಯೇನ್ ಕಾಣವನ್ದೇ.

ಪ್ರ|| ಈವು ಇಲಾದ-ಅವಿನಾಶ್ಯವಾದ, ತೀವಿನೈಕಳ್-ಕ್ರೂರವಾದ ಪಾಪಗಳನ್ನು, ಎತ್ತನೈ-ಅಸಂಖ್ಯಾತವಾಗಿ ಎಷ್ಟು, ಶೆಯ್ದನ್‌ಕೊಲ್–ನಾನು ಮಾಡಿದೆನೋ, ತಾವಿ-(ನಿನ್ನ ಪಾದಗಳಿಂದ)ಅಳೆದು, ವೈಯಮ್‌ಕೊಣ್ಡ-ಜಗತ್ತನ್ನೆಲ್ಲಾ ವಶೀಕರಿಸಿದ, ಎನ್ದಾಯ್-ನನ್ನ ಸ್ವಾಮಿಯೇ!, ತಾಮೋದರಾ- ದಾಮೋದರನೇ!, ಎನ್ರೆನ್ರು-ಎಂದು ಹೇಳಿ ಹೇಳಿ, ಕೂವಿಕ್ಕೂವಿ-ಕೂಗಿಕೂಗಿ, ನೆಞ್ಜುಉರುಕಿ-ಮನಸ್ಸು ದ್ರವೀಭೂತವಾಗಿ, ಕಣ್‌ಪನಿಶೋರ-ಕಣ್ಣುನೀರಾಗಿ ಸುರಿಯುತ್ತಿರುವಂತೆ, ನಿನ್ರಾಲ್ -(ಆರ್ತಿಯಿಂದ ನಾನು) ನಿಂತರೆ, ಪಾವಿಯೇನ್-ಪಾಪಿಯಾದ ನಾನು, ಕಾಣ-ಕಾಣುವಂತೆ, ವನ್ದು-(ನೀನು) ಬಂದು, "ನೀ ಪಾವಿ-ನೀನು ಪಾಪಿ" ಎನ್ರು-ಎಂದು, ಒನ್ರುಶೊಲ್ಲಾಯ್-ಒಂದು ಮಾತನ್ನೂ ಹೇಳುವುದಿಲ್ಲ. (ಅದನ್ನಾದರೂ ಮಾಡಿದರೆ ನನಗೆ ಸಮಾಧಾನವುಂಟಾಗುವುದೆಂದು ಭಾವವು.)

( ಸ-ಗಾ-ರ ||೬)—

ಪಾದಾಭ್ಯಾಂ ಜಗದಾಕ್ರಮಂ ರಚಯಿತಾ ಸ್ವಾಮಿಾ ಚ ದಾಮೋದರೋ
ವಿಖ್ಯಾತೋಽಸ್ತಿ ಭವಾನಿತಿ ಸ್ವಯಮಹಂ ತೂದ್ಘುಷ್ಯ ಚಾದ್ರಾಶಯಃ !
ಪೂರ್ಣಾಶ್ರುರ್ಯದಿ ಚಾಸ್ಮಿ ಮಾಂ ನ ಹಿ ಭವಾನ್ ಪಾಪೀ ಕಿಲಾಸೀತ್ಯಹೋ!
ವಾಚಂ ವಕ್ತಿ! ಮಮಾಸ್ತಿ ಪಾಪಸರಣಿರ್ನಿತ್ಯಾವಿನಾಶ್ಯಾ ತತಃ ||

ತಾ|| (ನನಗೆ ನಿನ್ನ ದರ್ಶನವನ್ನು ಕೊಡದೇ ಇದ್ದರೂ, "ನೀನು ಪಾಪಿ"—ಎಂದು ಒಂದು ಮಾತನ್ನಾದರೂ ನೀನು ಹೇಳಬಹುದಷ್ಟೆ!—ಎಂದು ಹೇಳುತ್ತಾರೆ.) ಅವಿನಾಶ್ಯವಾದ ಪಾಪಗಳನ್ನು ನಾನು ಅಸಂಖ್ಯಾತವಾಗಿ ಎಷ್ಟು ಮಾಡಿದೆನೋ ! ಜಗತ್ತನ್ನೆಲ್ಲಾ ಅಳೆದುಕೊಂಡ ನನ್ನ ಸ್ವಾಮಿಯಾದ ದಾಮೋದರನೇ ! ಎಂದು ಹೇಳಿಹೇಳಿ ಕೂಗಿಕೂಗಿ, ನನ್ನ ಮನಸ್ಸೆಲ್ಲಾ ಕರಗಿ ಕಣ್ಣುನೀರಾಗಿ ಸುರಿಯುತ್ತಿರು

ವಂತೆ ನಾನು ನಿಂತರೂ, ನೀನು ನನ್ನನ್ನು ನೋಡಿ "ನೀನು ಪಾಪಿಯಾದುದರಿಂದ ನಿನಗೆ ನಾನು ದೃಶ್ಯನಾಗುವುದಿಲ್ಲ" — ಎಂದು ಒಂದು ಮಾತನ್ನಾದರೂ ಹೇಳ ಬಾರದೇ? ಅದನ್ನೂ ನೀನು ಮಾಡುವುದಿಲ್ಲ.

(೪) ಕಾಣವನ್ದೆನ್ ಕಣ್ಮುಕಪ್ಪೇ ತಾಮರೈಕ್ಕಣ್ ಪಿಱಙ್ಗ,
ಆಣಿಶೆಮ್ಪೊನ್ಮೇನಿ ಯೆನ್ನಾಯ್ ನಿನ್ನರುಳಾಯೆನ್ಱೆನ್ಱು,
ನಾಣಮಿಲ್ಲಾ ಚ್ಚಿಱುತಕೈಯೇನ್ ನಾನಿಙ್ಗಲಱ್ಱುವದೆನ್,
ಪೇಣಿವಾನೋರ್ ಕಾಣ ಮಾಟ್ಟಾ ಪ್ಪೀಡುಡೈಯಪ್ಪನೈಯೇ.

ಪ|| ವಾನೋರ್-ಬ್ರಹ್ಮಾದಿದೇವತೆಗಳು, ಪೇಣಿ-(ತಮ್ಮ ಜ್ಞಾನ ಭಕ್ತಿಗಳಿಗೆ ಅನುಗುಣವಾಗಿ) ಆದರಿಸಿ, ಕಾಣಮಾಟ್ಟಾ-(ತಾವು) ಕಾಣುವುದಕ್ಕೆ ಶಕ್ತರಲ್ಲದವರಂತೆ, ಪೀಡು ಉಡೈ-ಮಹತ್ತ್ವವುಳ್ಳ, ಅಪ್ಪನೈ-ಸ್ವಾಮಿಯನ್ನು, ಆಣಿಶೆಮ್ಪೊನ್-ಶುದ್ಧಿಮಾಡಲ್ಪಟ್ಟ ಬಂಗಾರದಂತೆ ಸ್ಪೃಹಣೀಯವಾದ, ಮೇನಿ - ದಿವ್ಯಮಂಗಳ ವಿಗ್ರಹವುಳ್ಳ, ಎನ್ನಾಯ್-ನನ್ನ ಸ್ವಾಮಿಯೇ, ತಾಮರೈಕ್ಕಣ್-ತಾವರೆಯಂತಿರುವ, ಕಣ್ಣುಗಳು, ಪಿಱಙ್ಗ-ಪ್ರಕಾಶಿಸುವಲ್ಲಿ, ಕಾಣ-(ನಾನು ಎಲ್ಲವನ್ನೂ) ಕಾಣುವಂತೆ, ವನ್ದು-ಬಂದು, ಎನ್‌ಕಣ್‌ಮುಕಪ್ಪೇ-ನನ್ನ ಕಣ್ಣುಮುಂದೆ, ನಿನ್ನರುಳಾಯ್-ನೀನು ಕೃಪೆಯಿಂದ ನಿಲ್ಲು, ಎನ್ಱು ಎನ್ಱು-ಎಂದು ಹೇಳಿಹೇಳಿ, ನಾಣಮಿಲ್ಲಾ-ನಿರ್ಲಜ್ಜನಾದ, ಶಿಱುತಕೈಯೇನ್-ಕ್ಷುದ್ರಸ್ವಭಾವನಾದ, ನಾನ್-ನಾನು, ಇಙ್ಗು-ಇಲ್ಲಿ, ಅಲಱ್ಱುವದು ಎನ್-ಮೊರೆಯಿಡುವುದು ಏತಕ್ಕೆ ?

( ಸ-ಗಾ-ರ || )—

ಬ್ರಹ್ಮೇನ್ದ್ರಾದಿಸುರವ್ರಜೈರಪಿ ಭವಾನ್ ಭಕ್ತ್ಯೈರ್ನ ದೃಶ್ಯೋಽಸ್ತ್ಯಹೋ !
ಮಾಹಾತ್ಮ್ಯಂ ತವ ತಾದೃಶಂ ಹಿ ಪರಮಂ ಸ್ವಾಮಿನ್! ಸುವರ್ಣಾಕೃತೇ!
ಪದ್ಮಾಕ್ಷ! ತ್ವಮಿಹೈವ ಮೇ ನಯನಯೋರ್ದೃಶ್ಯೋ ಭವೇತ್ಯಪ್ಯಹಂ
ನಿರ್ಲಜ್ಜೋ ನನು ವಚ್ಮಿ ನೀಚಹೃದಯಃ! ಕಿಂ ಸ್ಯಾತ್ಫಲಂ ಮೇಽತ್ರ ವಾ?||

ತಾ|| (ಬ್ರಹ್ಮೇನ್ದ್ರಾದಿಗಳಿಗೂ ಅದೃಶ್ಯವಾದ ನಿನ್ನ ದಿವ್ಯರೂಪವನ್ನು ಕಾಣಬೇಕೆಂದು ವೃಥಾ ಆಶೆಪಡುವ ಕ್ಷುದ್ರಶೀಲನಾದ ನಾನು ನಿರ್ಲಜ್ಜನಲ್ಲವೇ ?—ಎನ್ನುತ್ತಾರೆ.) "ಬ್ರಹ್ಮಾದಿದೇವತೆಗಳೂ ಆದರದೊಡನೆ ಕಾಣಬೇಕೆಂದರೂ ಸಾಧ್ಯವಲ್ಲದಷ್ಟು ಮಹತ್ತ್ವವುಳ್ಳ ನನ್ನ ಸ್ವಾಮಿಯೇ! ಸ್ಪೃಹಣೀಯವಾದ, ಶುದ್ಧ ಸ್ವರ್ಣವರ್ಣವುಳ್ಳ ನಿನ್ನ ದಿವ್ಯಮಂಗಳವಿಗ್ರಹವನ್ನು ನಾನು ದರ್ಶನಮಾಡುವಂತೆ ನೀನು

ನನ್ನ ಮುಂದೆ (ಪ್ರಕಾಶಮಾನವಾದ ನಿನ್ನ ಲೋಚನಪದ್ಮಗಳೊಡನೆ) ಬಂದುನಿಲ್ಲು', —ಎಂದು ನಾನು ಕ್ಷುದ್ರಸ್ವಭಾವನಾಗಿದ್ದರೂ ಮೊರೆಯಿಡುತ್ತೇನಲ್ಲವೆ? ಇದರಿಂದ ಏನು ಪ್ರಯೋಜನ? ನನ್ನಂತಹ ನಿರ್ಲಜ್ಜರುಂಟೇ?—ಎಂದು ತಾತ್ಪರ್ಯ.

(೫) ಅಪ್ಪನೇ ಯೆಡಲಾೞಿಯಾನೇ ಯಾೞ್ಕಡಲೈಕ್ಕಡೈನ್ದ
ತುಪ್ಪನೇ, ಉನ್ ತೋಳ್‌ಕಳ್ ನಾನ್ಗುಮ್ ಕಣ್ಡಿಡ
ಕ್ಕೂಡುಮ್ಗೊಲೆನ್ಱು,
ಎಪ್ಪೊೞುದುಮ್ ಕಣ್ಣನೀರ್‌ಕೊಣ್ಡಾವಿ ತುವರ್‌ನ್ದು
ತುವರ್‌ನ್ದು
ಇಪ್ಪೊೞುದೇ ವನ್ದಿಡಾಯೆನ್ಱೆಱ್ರೈಯೇನ್ ನೋಕ್ಕುವನೇ.

ಪ್ರ|| ಅಪ್ಪನೇ - ಉಪಕಾರಕನಾದ ಸ್ವಾಮಿಯೇ!, ಅಡಲಾೞಿಯಾನೇ-ವಿರೋಧಿನಾಶಕವಾದ ಚಕ್ರವನ್ನು ಧರಿಸಿರುವವನೇ, ಆೞ್ಕಡಲೈ-ಅಗಾಧವಾದ ಸಮುದ್ರವನ್ನು, ಕಡೈನ್ದ-ಮಥನಮಾಡಿದ, ತುಪ್ಪನೇ-ಮಹಾಬಲಿಷ್ಠನೇ, ಉನ್ ತೋಳ್‌ಕಳ್‌ನಾನ್ಗುಮ್-ನಿನ್ನ ತೋಳುಗಳು ನಾಲ್ಕನ್ನೂ, ಕಣ್ಡಿಡಕೂಡುಮ್ಗೊಲ್-ಕಂಡುಬಿಡಬಹುದೋ?, ಎನ್ಱು-ಎಂದು ಭಾವಿಸಿ, ಎಪ್ಪೊೞುದುಮ್-ಯಾವಾಗಲೂ, ಕಣ್ಣನೀರ್‌ಕೊಣ್ಡು-ಕಣ್ಣುನೀರು ಸುರಿಸಿ, ಆವಿ-ಪ್ರಾಣವು, ತುವರ್‌ನ್ದುತುವರ್‌ನ್ದು -ಶುಷ್ಕಶುಷ್ಕವಾಗಿ ಒಣಗಿಹೋಗಿ, ಇಪ್ಪೊೞುದೇ-ಈಗಲೇ, ವನ್ದಿಡಾಯ್-ಬಂದುಬಿಡು, ಎನ್ಱು-ಎಂದು ತ್ವರೆಯೊಡನೆ ಕೂಗಿ, ಏಱ್ರೈಯೇನ್-ಚಪಲನಾದ ನಾನು, ನೋಕ್ಕುವನ್-(ನೀನು ಬರುತ್ತೀಯೆ ಎಂದು) ನಿರೀಕ್ಷಿಸುತ್ತಿರುವೆನು.

( ಸ-ಗಾ-ರ || )—

ಸ್ವಾಮಿನ್ನಾಶ್ರಿತವತ್ಸಲೋಽಸಿ ಹಿ ಹರೇ! ಶ್ರೀಚಕ್ರಪಾಣೇ! ಭವಾನ್
ವೀರೋ ವಾರಿಧಿಮನ್ಥನೋ ನನು ಭುಜೈರ್ದಿವ್ಯೈಶ್ಚತುರ್ಭಿಸ್ತವ |
ಇತ್ಯೇವಂ ಸತತಂ ಸಬಾಷ್ಪನಯನಃ ಪ್ರಾಣೈಶ್ಚ ಶುಷ್ಕಾಯಿತೈ-
ರಾಕ್ರನ್ದಾಮ್ಯಧುನೈವ ಸತ್ವರಮಹಂ ದ್ರಷ್ಟುಂ ಹಿ ಮೇ ಚಾಪಲಾತ್ ||

ತಾ|| ("ಮಹೋಪಕಾರಕನೇ! ಚಕ್ರಪಾಣಿಯೇ! ಸಮುದ್ರಮಥನಮಾಡಿ ದೇವತೆಗಳಿಗೆ ಅಮೃತವನ್ನು ಕೊಟ್ಟ ಮಹಾಬಲಿಷ್ಠನೇ! ನಿನ್ನ ನಾಲ್ಕು ತೋಳುಗಳನ್ನೂ ನೋಡಿ ನಾವು ಹೇಗೆ ಬಿಡುವೆವು?"—ಎಂದು ಭಾವಿಸಿ ಯಾವಾಗಲೂ

ಕಣ್ಣು ನೀರು ಸುರಿಸಿ, ನನ್ನ ಪ್ರಾಣವು ಶುಷ್ಕವಾಗಿ—"ನೀನು ಈಗಲೇ ಬಾ"—ಎಂದು ನಿನ್ನನ್ನು ಕೂಗಿ ಕೂಗಿ ಅತಿಚಪಲನಾದ ನಾನು ನೀನು ಬರುತ್ತೀಯೆಂದು ದಿಕ್ಕುಗಳಂ ನೋಡಿ ನಿರೀಕ್ಷಿಸುತ್ತಿರುವೆನು.

(೬) ನೋಕ್ಕಿನೋಕ್ಕಿ ಯುನ್ನೈಕ್ಕಾಣ್ಬಾನ್ ಯಾನೆನದಾವಿಯುಳ್ಳೇ
ನಾಕ್ಕುನೀಳ್ವನ್ ಞಾನವಿಲ್ಲೈ ನಾಳ್‌ತೋಱುಮೆನ್ನುಡೈಯ,
ಆಕ್ಕೈಯುಳ್ಳುಮಾವಿಯುಳ್ಳುಮಲ್ಲ ಪುಱತ್ತಿನುಳ್ಳುಮ್,
ನೀಕ್ಕಮಿನ್ದ್ರಿ ಯೆಙ್ಗುಮ್ ನಿನ್ಱಾಯ್ ನಿನ್ನೈ ಯಱಿನ್ದಱಿನ್ದೇ.

ಪ್ರ|| ನಾಳ್‌ತೋಱುಮ್-ಪ್ರತಿದಿನವೂ, ಎನ್ನುಡೈಯ-ನನ್ನ, ಆಕ್ಕೈಯುಳ್ಳುಮ್-ಶರೀರದೊಳಗೂ (ಹೃದಯದಲ್ಲೂ), ಆವಿಯುಳ್ಳುಮ್-ಆತ್ಮಸ್ವರೂಪದಲ್ಲೂ, ಅಲ್ಲ-ಮಿಕ್ಕ, ಪುಱತ್ತಿನುಳ್ಳುಮ್ - (ಬಹಿರ್ಭೂತವಾದ) ಇನ್ದ್ರಿಯಾದಿಗಳಲ್ಲೂ, ನೀಕ್ಕಮಿನ್ಱಿ-ಒಂದನ್ನೂ ಬಿಡದಂತೆ, ಎಙ್ಗುಮ್‌ನಿನ್ಱಾಯ್ - ಎಲ್ಲಾ ಸ್ಥಲಗಳಲ್ಲೂ ನಿಂತವನೇ!, ನಿನ್ನೈ ಅಱಿನ್ದಱಿನ್ದು-ನಿನ್ನನ್ನು (ಜ್ಞಾನದಿಂದ) ತಿಳಿದು ತಿಳಿದು, ಉನ್ನೈಕ್ಕಾಣ್ಬಾನ್-(ಸುನ್ದರವಿಗ್ರಹನಾದ) ನಿನ್ನನ್ನು ಕಣ್ಣಿನಿಂದ ಕಾಣಬೇಕೆಂದು, ನೋಕ್ಕಿ ನೋಕ್ಕಿ-ನಿರೀಕ್ಷಿಸಿ ನೋಡಿ ನೋಡಿ, ಯಾನ್ - (ಚಪಲನಾದ) ನಾನು, ಎನದು ಆವಿಯುಳ್ಳೇ-ನನ್ನ ಹೃದಯದಲ್ಲಿ, ನಾಕ್ಕು ನೀಳ್ವನ್-(ನಾಲಿಗೆ ನೀಡುತ್ತಿರುವೆನು) ಆಶೆಪಡುತ್ತಿರುವೆನು. ಞಾನಮ್-(ಅನ್ತರಾತ್ಮನು ಅದೃಶ್ಯನೆಂಬ) ಜ್ಞಾನವು, ಇಲ್ಲೈ-(ನನಗೆ) ಇಲ್ಲ.

( ಸ-ಗಾ-ರ || )—

ಅನ್ತರ್ಮೇ ಹೃದಯೇಽಪಿ ಚಾತ್ಮನಿ ಬಹಿಶ್ಚಾಪಿ ಸ್ವಯಂ ಸನ್ತತಂ
ಭಾಸ್ವಾನೇವ ಭವಾನಿತಿ ಸ್ವಯಮಹಂ ಜ್ಞಾತ್ವಾಽಪಿ ಚಾನ್ತರ್ಹೃದಿ |
ದ್ರಷ್ಟುಂ ತ್ವಾಂ ಬಹುಧಾಽಸ್ಮಿ ಚಾಪಲವಶೋ ನೇತ್ರದ್ವಯೇನೇತ್ಯಹೋ !
ಮೌಢ್ಯಂ ಮೇ ಮಹದಸ್ತಿ ದುಸ್ಸಹಮಿದಂ ಕಿಂ ದುರ್ನಿವಾರಂ ಭವೇತ್ ? ||

ತಾ|| (ನೀನು ಅನ್ತರಾತ್ಮನಾಗಿ ನನ್ನ ಹೃದಯದಲ್ಲಿ ನಿತ್ಯವಾಸವಂ ಮಾಡುತ್ತೀಯೆಂದು ತಿಳಿದುತಿಳಿದೂ ನಿನ್ನನ್ನು ಕಣ್ಣಿನಿಂದ ನೋಡಬೇಕೆಂದು ನಾನು ಆಶೆಪಡುವುದು ನನ್ನ ಜ್ಞಾನರಾಹಿತ್ಯದಿಂದಲೇ-ಎನ್ನುತ್ತಾರೆ.) ಪ್ರತಿದಿನವೂ ನನ್ನ ಹೃದಯದಲ್ಲೂ ಆತ್ಮವಸ್ತುವಿನಲ್ಲೂ ಇನ್ದ್ರಿಯಾದಿಗಳಲ್ಲೂ ನಿಂತಿರುವವನೇ! ನಿನ್ನ

ಅನ್ತರ್ಯಾಮಿತ್ವವನ್ನು ನಾನು ತಿಳಿದು ತಿಳಿದೂ, ನಿನ್ನನ್ನು ಕಣ್ಣಿನಿಂದ ಕಾಣಬೇಕೆಂದು ಆಶೆಪಡುತ್ತಿದೇನಲ್ಲವೆ! ಇದಕ್ಕೆ ಚಪಲನಾದ ನನ್ನ ಮೌಢ್ಯವೇ ಕಾರಣ. (ಎಂದು ತಾತ್ಪರ್ಯ.)

(೭) ಅಱಿನ್ದಱಿನ್ದು ತೇಱಿತ್ತೇಱಿ ಯಾನೆನದಾವಿಯುಳ್ಳೇ,
ನಿಱೈನ್ದ ಞಾನಮೂರ್ತ್ತಿಯಾಯೈ ನಿರ್ಮಲಮಾಕ ವೈತ್ತು,
ಪಿಱನ್ದುಮ್ ಶೆತ್ತುಮ್ ನಿನ್ಱಿಡಱುಮ್ ಪೇದೈಮೈ
ತೀರ್ನ್ದೊೞಿನ್ದೇನ್,
ನಱುನ್ದುೞಾಯಿನ್ ಕಣ್ಣಿಯಮ್ಮಾ ನಾನುನ್ನೈ
ಕ್ಕಣ್ಡುಕೊಣ್ಡೇ.

ಪ್ರ॥ ನಱುಮ್ ತುೞಾಯಿನ್-ಪರಿಮಳಭರಿತವಾದ ತುಳಸಿಯುಳ್ಳ, ಕಣ್ಣಿ-ಮಾಲಿಗಳನ್ನು ಧರಿಸಿರುವ, ಅಮ್ಮಾ-ಸ್ವಾಮಿಯೇ (ಸರ್ವಾಧಿಕನೇ), ನಾನ್-ನಾನು, ಉನ್ನೈ-ನಿನ್ನನ್ನು, ಕಣ್ಡುಕೊಣ್ಡು-(ನನ್ನ ಮನಸ್ಸಿನಿಂದ ಚಿನ್ತಿಸಿ) ಕಂಡುಕೊಂಡು, ಅಱಿನ್ದು ಅಱಿನ್ದು-(ನಿನ್ನ ಪ್ರಾಪ್ಯಪ್ರಾಪಕಭಾವಗಳನ್ನು) ತಿಳಿದು ತಿಳಿದು, ತೇಱಿತ್ತೇಱಿ-ಜ್ಞಾನವೈಶದ್ಯವಂ ಪಡೆದು, ಯಾನ್-ನಾನು, ಎನದು ಆವಿಯುಳ್ಳೇ-ನನ್ನ ಪ್ರಾಣಾಶ್ರಯವಾದ ಹೃದಯದಲ್ಲಿ, ನಿಱೈನ್ದ ಞಾನಮೂರ್ತ್ತಿಯಾಯೈ-ಪರಿಪೂರ್ಣ ಜ್ಞಾನಸ್ವರೂಪನಾದ ನಿನ್ನನ್ನು, ನಿರ್ಮಲಮಾಕ-ಸಂಶಯವಿಪರ್ಯಯಾದಿದೋಷವಿಲ್ಲದಂತೆ, ವೈತ್ತು-(ಪ್ರತಿಷ್ಠಿತವಾಗಿ) ಇಟ್ಟು, ಪಿಱನ್ದುಮ್ ಶೆತ್ತುಮ್-ಜನನಮರಣಗಳಿಂದ, ನಿನ್ಱು-ನಿಂತು, ಇಡಱುಮ್-ಕ್ಲೇಶಪಡುವ, ಪೇದೈಮೈ-ಜ್ಞಾನರಾಹಿತ್ಯವನ್ನು (ಮೂಢತ್ವವನ್ನು), ತೀರ್ನ್ದೊೞಿನ್ದೇನ್-ನಾಶಪಡಿಸಿದೆನಷ್ಟೆ.

( ಸ-ಗಾ-ರ ॥ )—

ಸ್ವಸ್ತ್ರಗ್ದಿವ್ಯಸುಗನ್ಧರಮ್ಯತುಳಸೀಮಾಲಾಢ್ಯ ! ಸರ್ವೇಶ್ವರ !
ತ್ವಾಂ ದೃಷ್ಟ್ವಾಽಪಿ ಚ ಚಕ್ಷುಷಾ ಹೃದಿ ಸದಾ ನಿಧ್ಯಾಯ ಶಾನ್ತೋಽನ್ತರಾ।
ಏಷೋಽಹಂ ಮಮ ಚಾನ್ತರಾತ್ಮನಿ ಹರಿಂ ಜ್ಞಾನೈಕಮೂರ್ತಿಂ ಪರಂ
ಕೃತ್ವಾ ತ್ವಾಂ ಜನಿಮೃತ್ಯುಪಾಶಸರಣೇರ್ಮೋಹಾಚ್ಚ ದೂರೀಕೃತಃ ॥

ತಾ॥ ಪರಿಮಳಭರಿತವಾದ ತುಳಸೀಮಾಲೆಯನ್ನು ಧರಿಸಿರುವ ಸ್ವಾಮಿಯೇ ನಾನು ನಿನ್ನನ್ನು ಮನಸ್ಸಿನಲ್ಲಿ ಚಿನ್ತಿಸಿ ನಿನ್ನ ಸ್ವರೂಪವನ್ನು ತಿಳಿದು ತಿಳಿದು ವಿಶ

ಜ್ಞಾನವುಳ್ಳವನಾಗಿ ದಿವ್ಯಜ್ಞಾನನಿಧಿಯಾದ ನಿನ್ನನ್ನು ನನ್ನ ಹೃದಯದಲ್ಲಿ ಪ್ರತಿಷ್ಠಾಪಿಸಿ ಜನನಮರಣಾದಿ ಕ್ಲೇಶಜನಕವಾದ ಮೌಢ್ಯದಿಂದ ಮುಕ್ತನಾಗಿದೇನೆ. ಇದು ಸಾಲದು. (ನಿನ್ನ ಸಾಕ್ಷಾದ್ದರ್ಶನಕ್ಕಾಗಿ ಈಗ ಆಶೆಪಡುತ್ತಿದೇನೆ.)

(೮) ಕಣ್ಡುಕೊಣ್ಡೆನ್ ಕೈಕಳಾರ ನಿನ್ ತಿರುಪ್ಪಾದಙ್ಗಳ್‌ಮೇಲ್,
ಎಣ್ಡಿಶೈಯುಮುಳ್ಳ ಪೂಕ್ಕೊಣ್ಡೇತ್ತಿ ಯುಕನ್ದುಕನ್ದು,
ತೊಣ್ಡರೋಙ್ಗಳ್ ಪಾಡಿಯಾಡ ಚೂೞ್‌ಕಡಲ್ ಞಾಲತ್ತುಳ್ಳೇ
ವಣ್ಡುೞಾಯಿನ್‌ಕಣ್ಣ ವೇನ್ದೇ ವನ್ದಿಡ ಕಿಲ್ಲಾಯೇ.

ಪ್ರ|| ಕಣ್ಡುಕೊಣ್ಡು–ಸಾಕ್ಷಾತ್ತಾಗಿ ಕಣ್ಣಿನಿಂದ ಕಂಡು, ಎನ್‌ಕೈಕಳ್–ನನ್ನ ಹಸ್ತಗಳು, ಆರ–ಪೂರ್ಣವಾಗುವಂತೆ (ಮನೋರಥ ಪೂರ್ತಿಯಾಗುವಂತೆ), ನಿನ್–ನಿನ್ನ, ತಿರುಪ್ಪಾದಙ್ಗಳ್‌ಮೇಲ್ – ಪಾದಗಳಮೇಲೆ, ಎಣ್‌ದಿಶೈಯುಮ್–ಎಂಟು ದಿಕ್ಕುಗಳಲ್ಲೂ, ಉಳ್ಳ–ಉಂಟಾಗಿರುವ, ಪೂಕ್ಕೊಣ್ಡು–ಪುಷ್ಪಗಳನ್ನೆಲ್ಲಾ ಸಂಪಾದಿಸಿ, ಏತ್ತಿ–ಸ್ತೋತ್ರದೊಡನೆ ಸಮರ್ಪಿಸಿ, ಉಕನ್ದು ಉಕನ್ದು–ಅತ್ಯನ್ತಪ್ರೀತಿಪರವಶರಾಗಿ, ತೊಣ್ಡರೋಙ್ಗಳ್–ಭಕ್ತೋತ್ತಮರಾದ ನಾವು, ಪಾಡಿಯಾಡ–ಗಾನ ನೃತ್ತಗಳಂ ಮಾಡುವಂತೆ, ಕಡಲ್‌ಶೂೞ್ ಞಾಲತ್ತುಳ್ಳೇ–ಸಮುದ್ರಪರಿವೃತವಾದ ಈ ಲೋಕದಲ್ಲಿ, ವಣ್‌ತುೞಾಯಿನ್‌ಕಣ್ಣ – ದಿವ್ಯತುಳಸೀಮಾಲಾಧರನಾದ, ವೇನ್ದೇ–ಸ್ವಾಮಿಯೇ !, ವನ್ದಿಡಕಿಲ್ಲಾಯೇ–ನೀನು (ಪ್ರತ್ಯಕ್ಷನಾಗಿ) ಬರುವುದಿಲ್ಲ.

( ಸ–ಗಾ–ರ || )—

ದೃಷ್ಟ್ವಾ ತ್ವಾಂ ತವ ಪಾದಪದ್ಮಯುಗಳೇ ಹಸ್ತೈಸ್ಸಮುಪ್ಯಾರ್ಪ್ಯಮಾ
ಭಕ್ತ್ಯಾ ಸರ್ವದಿಶೋಪಲಭ್ಯಕುಸುಮಾನ್ಯಾರಾಧ್ಯ ಚ ಸ್ತೋತ್ರತಃ|
ಹೃಷ್ಟಾಸ್ಸಪ್ರೀತಿ ಗೀತನೃತ್ಯಸಹಿತಾ ಭಕ್ತಾ ವಯಂ ಸ್ಯಾಮ ಚೇ–
ತ್ಯೇವಂ ತ್ವಂ ತುಲಸೀಸ್ರಜಾಽಞ್ಚಿತ ! ವಿಭೋ! ಲೋಕೇಽತ್ರ ನಾಗಚ್ಛಸಿ||

ತಾ|| ದಿವ್ಯತುಳಸೀಮಾಲಾಧರನಾದ ನಮ್ಮ ಸ್ವಾಮಿಯೇ ! ನಾನು ನಿನ್ನನ್ನು ಸಾಕ್ಷಾತ್ತಾಗಿ ಕಂಡು ನನ್ನ ಕೈಗಳಿಂದ ನಿನ್ನ ಪಾದಗಳಮೇಲೆ ಸಕಲವಿಧವಾದ ಪುಷ್ಪಗಳನ್ನೂ ಸ್ತೋತ್ರಗಳೊಡನೆ ಸಮರ್ಪಿಸಿ ಅತ್ಯನ್ತ ಪ್ರೀತಿಪರವಶನಾಗಿ ಭಕ್ತೋತ್ತಮರೊಡನೆಕೂಡಿ ಗಾನಮಾಡುವಂತೆಯೂ ನರ್ತನಮಾಡುವಂತೆಯೂ ನೀನು ಈ ಲೋಕದಲ್ಲಿ ನಮಗೆ ಪ್ರತ್ಯಕ್ಷವಾಗಿ ಬಂದು ದೃಶ್ಯನಾಗುವುದಿಲ್ಲ. (ಈ ನಮ್ಮ ಮನೋರಥವನ್ನು ಎಂದಿಗೆ ಸಫಲಮಾಡುತ್ತೀಯೋ ?—ಎಂದು ಭಾವವು.)

(೯) ಇಡಕಿಲೇನೊನ್ರಟ್ಟಕಿಲ್ಲೇನ್ಐಮ್ಪುಲನ್ ವೆಲ್ಲಕಿಲ್ಲೇನ್,
ಕಡವನಾಕಿ ಕ್ಕಾಲಮ್ ತೋಱುಮ್ ಪೂಪ್ಪಱಿತ್ತೇತ್ತಕಿಲ್ಲೇನ್,
ಮಡವನ್ನೆಞ್ಜಮ್ ಕಾದಲ್‌ಕೂರ
ವಲ್ವಿನ್ಯೆಯೇನಯಪ್ಪಾಯ್
ತಡವುಕಿನ್ರೇನೆಙ್ಗುಕ್ಕಾಣ್ಬನ್ ಶಕ್ಕರತ್ತಣ್ಣಲ್ಲೈಯೇ.

ಪ್ರ|| ಒನ್ರು ಇಡಕಿಲೇನ್, ಒನ್ರು ಅಟ್ಟಕಿಲ್ಲೇನ್-(ಹಸಿವೂ ದಾಹವೂ ಉಳ್ಳವರಿಗೆ) ನಾನು ಒಂದು ಹಿಡಿ ಅನ್ನವನ್ನು ಇಡಲಾರೆನು, ಒಂದು ಗುಟಕು ನೀರನ್ನು ಕೊಡಲಾರೆನು. (ಹೀಗೆ ಕರ್ಮಯೋಗ ನಿಷ್ಠೆಯಿಲ್ಲದೆ ಇದ್ದರೂ, ಜ್ಞಾನಯೋಗ ನಿಷ್ಠೆಯಾದರೂ ನನಗೆ ಇದೆಯೋ—ಎಂದರೆ) ಐಮ್ಪುಲನ್ ವೆಲ್ಲಕಿಲ್ಲೇನ್-ಐದು ಇನ್ದ್ರಿಯಗಳನ್ನೂ ಜಯಿಸಲೂ ನಾನು ಶಕ್ತನಲ್ಲ. (ಭಕ್ತಿಯೋಗದಲ್ಲಿ ನನಗೆ ಅನ್ವಯವಿದೆಯೋ – ಎಂದು ನೋಡಿದರೆ) ಕಡವನಾಕಿ – ನಿಯಮಗಳೊಡನೆಕೂಡಿ, ಕಾಲಮ್ ತೋಱುಮ್ – ತಕ್ಕಕಾಲಗಳಲ್ಲೆಲ್ಲಾ, ಪೂಪ್ಪಱಿತ್ತು – ಪುಷ್ಪಗಳನ್ನು ಕೊಯ್ದುಕೊಂಡು ಬಂದು, ಏತ್ತಕಿಲ್ಲೇನ್ – ಆರಾಧಿಸಿ ಸ್ತೋತ್ರಮಾಡಲಾರೆನು. (ಹೀಗೆ ಅಕಿಂಚನನಾಗಿರುವ ನಾನು) ಮಡವಲ್ ನೆಞ್ಜಮ್-ಹಠದೊಡನೆ ಕೂಡಿದ ಮನಸ್ಸಿನಲ್ಲಿ, ಕಾದಲ್‌ಕೂರ-ಅತ್ಯಾಶೆಯಿಂದ ಕೂಡಿದವನಾಗಿ, ವಲ್‌ವಿನ್ಯೆಯೇನ್-ಮಹಾಪಾಪಗಳುಳ್ಳ ನಾನು, ಅಯಪ್ಪಾಯ್-ನನ್ನ ಮೌಢ್ಯದಿಂದ ಕೂಡಿದವನಾಗಿ, ಶಕ್ಕರತ್ತು ಅಣ್ಣಲ್ಲೈಯೇ-ಚಕ್ರಪಾಣಿಯಾದ ಸ್ವಾಮಿಯನ್ನೇ, ತಡವುಕಿನ್ರೇನ್-ಹುಡುಕುತ್ತಿದೇನೆ. ಎಙ್ಗುಕ್ಕಾಣ್ಬನ್-ಎಲ್ಲಿ ಕಾಣುವೆನು ?

( ಸ–ಗಾ–ರ || )—

ಅನ್ನಂ ನೈವ ದದಾಮಿ ಜಾತುಚಿದಹಂ ಪಾನೀಯಮಪ್ಯರ್ಥಿನೇ
ಜ್ಞಾತುಂ ನೈವ ಜಯಾಮಿ ಪಞ್ಚಕರಣಗ್ರಾಮಂ! ನ ಭಕ್ತ್ಯಾ ಸದಾ |
ಪುಷ್ಪೈರರ್ಚಯಿತುಂ ಯತೇ ಸ್ತುತಿಪರಃ ಪಾಪೀ ಕಿಲಾಜ್ಞೋಽಸ್ಮ್ಯಹಂ
ದ್ರಷ್ಟುಂ ಚಕ್ರಧರಂ ತಥಾಽಪಿ ಕುತುಕೀ ಪಶ್ಯಾಮ್ಯಹಂ ಕ್ವಾಚ್ಯುತಮ್?||

ತಾ|| (ನನ್ನಲ್ಲಿ ಕರ್ಮಯೋಗ-ಜ್ಞಾನಯೋಗ-ಭಕ್ತಿಯೋಗಾದಿ ಸಾಧನಗಳಲ್ಲಿ ಯಾವುದೂ ಇಲ್ಲದೆ ಇದ್ದರೂ ಚಕ್ರಪಾಣಿಯಾದ ಸ್ವಾಮಿಯನ್ನು ಕಾಣಬೇಕೆಂಬ ಆಶೆಯು ಪ್ರಬಲವಾಗಿದೆ. ಇದು ನನ್ನ ಮೌಢ್ಯದಕಾರ್ಯ—ಎನ್ನುತ್ತಾರೆ.) ನಾನು ಒಂದು ಹಿಡಿ ಅನ್ನವನ್ನು ಒಬ್ಬರಿಗೆ ಇಡುವವನಲ್ಲ; ಒಂದು ಗುಟಕು ನೀರನ್ನು

ಒಬ್ಬರಿಗೆ ಕೊಡುವವನಲ್ಲ; ಇನ್ದ್ರಿಯಗಳನ್ನು ಜಯಿಸಲೂ ಶಕ್ತನಲ್ಲ; ಪುಷ್ಪಗಳನ್ನು ಸಂಪಾದಿಸಿ ಭಕ್ತಿನಿಷ್ಠನಾಗಿ ಸ್ತೋತ್ರಮಾಡಿ ಆರಾಧಿಸಲೂ ಶಕ್ತನಲ್ಲ. ಹೀಗೆ ಅಕಿಂಚನನಾಗಿದ್ದಾಗ್ಯೂ ಪಾಪಿಷ್ಠನಾದ ನಾನು ನನ್ನ ಮೌಢ್ಯದಿಂದ ಚಕ್ರಪಾಣಿಯಾದ ಸ್ವಾಮಿಯನ್ನು ನೋಡಬೇಕೆಂದು ಹುಡುಕುತ್ತಿದೇನೆ. ಇದು ಹೇಗೆ ಸಾಧ್ಯವಾಗುವುದು ?

(೧೦) ಶಕ್ಕರತ್ತಣ್ಣಲೇ ಯೆನ್ರು ತಾೞ್ನ್ದು ಕಣ್ಣೀರ್ ತದುಮ್ಬ,
ಪಕ್ಕಮ್ನೋಕ್ಕಿ ನಿನ್ರಲನ್ದೇನ್ ಪಾವಿಯೇನ್ ಕಾಣ್ಕಿನ್ರಿಲೇನ್,
ಮಿಕ್ಕಞಾನಮೂರ್ತ್ತಿಯಾಯ ವೇದವಿಳಕ್ಕಿನ್ನೈ, ಎನ್
ತಕ್ಕಞಾನಕ್ಕಣ್ಕಳಾಲೇ ಕಣ್ಡು ತೞುವುವನೇ.

ಪ್ರ|| ಶಕ್ಕರತ್ತಣ್ಣಲೇ – ಚಕ್ರಧಾರಿಯಾದ ಸ್ವಾಮಿಯೇ !, ಎನ್ರು–ಎಂದು ಹೇಳಿ, ತಾೞ್ನ್ದು–ಸಾಷ್ಟಾಂಗವಾಗಿ ಭೂಮಿಯಲ್ಲಿ ಬಿದ್ದು, ಕಣ್ಣೀರ್ ತದುಮ್ಬ–ಕಣ್ಣುನೀರು ತುಂಬಿರುವಂತೆ, ಪಕ್ಕಮ್ನೋಕ್ಕಿ–ಸುತ್ತಲೂ ನೋಡಿ, ನಿನ್ರು–ನಿಂತು, ಅಲನ್ದೇನ್-ಕ್ಲೇಶಪಟ್ಟೆನು. ಪಾವಿಯೇನ್-ಪಾಪಿಯಾದ ನಾನು, ಕಾಣ್ಕಿನ್ರಿಲೇನ್–ನೋಡಲಾರೆನು. ಮಿಕ್ಕ ಞಾನಮೂರ್ತ್ತಿಯಾಯ–ಅಪರಿಚ್ಛಿನ್ನ ಜ್ಞಾನಸ್ವರೂಪನಾದ, ವೇದವಿಳಕ್ಕಿನ್ನೈ–ವೇದವೆಂಬ ದೀಪದಿಂದ ಪ್ರಕಾಶಿಸುವವನನ್ನು, ಎನ್–ನನ್ನ, ತಕ್ಕ–ಉಚಿತವಾದ, ಞಾನಕ್ಕಣ್ಕಳಾಲೇ–ಜ್ಞಾನದೃಷ್ಟಿಯಿಂದ, ಕಣ್ಡು–ಕಂಡು, ತೞುವುವನ್-ಸಂಶ್ಲೇಷಿಸುತ್ತೇನಲ್ಲವೇ ! (ಹೀಗೆ ಜ್ಞಾನವಿಷಯವೇ ಆಗಬೇಕೋ ?)

( ಸ–ಗಾ–ರ || )—

ಸ್ವಾಮಿನ್ ! ಚಕ್ರಧರೇತಿ ಚಾರ್ತಹೃದಯೋ ನಮ್ರಶ್ಚ ಸಾಶ್ರುಸ್ಸದಾ
ತ್ವಾಮನ್ವಿಷ್ಯ ವಿಷಾದವಾನಹಮಹೋ ! ಪಾಪೀ ನ ಪಶ್ಯಾಮಿ ಹಿ |
ದಿವ್ಯಜ್ಞಾನನಿಧಿಂ ಹರಿಂ ಮುರರಿಪುಂ ವೇದೈಕವೇದ್ಯಂ ಕಿಲ
ತ್ವಾಮಾಲಿಂಗ್ಯ ಕೃತೀ ಭವಾಮಿ ಮನಸಾ ಮಜ್ಜ್ಞಾನದೃಷ್ಟ್ಯಾ ಭಜನ್||

ತಾ|| ಚಕ್ರಧಾರಿಯಾದ ಸ್ವಾಮಿಯೇ !—ಎಂದು ನಾನು ಭೂಮಿಯಲ್ಲಿ ಬಿದ್ದು (ನಿನ್ನನ್ನು ಕಾಣಬೇಕೆಂದು) ಕಣ್ಣುನೀರು ತುಂಬಿಕೊಂಡು ಸುತ್ತಲೂ ನೋಡಿ ಕ್ಲೇಶಪಟ್ಟೆನು. ಪಾಪಿಯಾದ ನಾನು ನಿನ್ನನ್ನು ಕಾಣಲಾರೆನು. (ಮರೆತುಬಿಡಲೂ ಆಗದಂತೆ) ಅಪರಿಚ್ಛಿನ್ನ ಜ್ಞಾನಮೂರ್ತಿಯಾದ ವೇದಪ್ರತಿಪಾದ್ಯನಾದ

ನಿನ್ನನ್ನು ನನ್ನ ಜ್ಞಾನದೃಷ್ಟಿಯಿಂದ ಕಂಡು ಸಂಶ್ಲೇಷಿಸುತ್ತಿದೇನಲ್ಲವೆ ! (ಇದರಿಂದ ನಿನ್ನನ್ನು ಮರೆತುಬಿಡುವುದಕ್ಕೂ ಅವಕಾಶವಿಲ್ಲ. ಹೇಗೆ ಜೀವಿಸಲಿ ? )

(೧೧) ತಿೞುವಿನ್ನಿಸ್ಸ ಕಾದಲ್ ತನ್ನಾಲ್ ತಾಮರೈಕ್ಕಣ್ಣನ್ ತನ್ನೈ,
ಕುೞುವುಮಾಡ ತ್ತೆನ್ ಕುರುಕೂರ್ ಮಾಱನ್
ಶಡಕೋಪನ್ ಶೊಲ್,
ವೞುವಿಲಾದ ವೊಣ್ ತಮಿೞ್ ಕಳ್ ಆಯಿರತ್ತುಳ್ ಇಪ್ಪತ್ತುಮ್,
ತಿೞುವಪ್ಪಾಡಿ ಯಾಡವಲ್ಲಾರ್ ವೈಕುನ್ದಮೇಱುವರೇ.

ಪ್ರ|| ತಿೞುವಿ – ಸ್ವರೂಪೈಕ್ಯವಂ ಪಡೆದು, ನಿನ್ರ – ಸ್ಥಿರವಾದ, ಕಾದಲ್ ತನ್ನಾಲ್–ಭಗವದನುಭವಾಪೇಕ್ಷೆಯಿಂದ, ತಾಮರೈಕ್ಕಣ್ಣನ್‌ತನ್ನೈ–ಪುಂಡರೀಕಾಕ್ಷನಾದ ಅವನನ್ನು ಕುರಿತು, ಕುೞುವುಮಾಡ–ಸಂಘೀಭೂತವಾದ ಮಾಳಿಗೆಗಳುಳ್ಳ, ತೆನ್‌ಕುರುಕೂರ್–ಕುರುಕಾಪುರೀಶ್ವರರಾದ, ಮಾಱನ್–ಮಾಱನ್ ಎಂಬ ನಾಮಧೇಯವುಳ್ಳ, ಶಡಕೋಪನ್ – ನಮ್ಮಾೞ್ವಾರ್, ವೞುವಿಲಾದಶೊಲ್ – ಭಗವನ್ತನ ಗುಣಗಳಲ್ಲಿ ಒಂದನ್ನೂ ಬಿಡದ ಸೂಕ್ತಿರೂಪವಾದ, ಒಣ್‌ತಮಿೞ್‌ಕಳ್–ದಿವ್ಯದ್ರಾವಿಡ ಪ್ರಬನ್ಧಾತ್ಮಕವಾದ, ಆಯಿರತ್ತುಳ್–ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್–ಈ ದಶಕವನ್ನು, ತಿೞುವ ಪಾಡಿ–ಇಂಪಾಗಿಹಾಡಿ, ಆಡವಲ್ಲಾರ್–ನರ್ತನಮಾಡಿ ಆಡಬಲ್ಲವರು, ವೈಕುನ್ದಮ್–ಪರಮಪದವನ್ನು, ಏಱುವರ್–ಹತ್ತುವರು (ಹೊಂದುವರು)

( ಸ–ಗಾ–ರ || )—

ಭಕ್ತ್ಯೈಷೌ ದೃಢಭಾವಬನ್ಧಭರಿತಸ್ತೋತುಂ ಸರೋಜಾಮ್ಬಕಂ
ರಮ್ಯಶ್ರೀಕುರುಕೇಶ್ವರಶ್ಶಠರಿಪುಃ ಪದ್ಯಾವಳೀಂ ದ್ರಾವಿಡೀಮ್ |
ದಿವ್ಯಾಂ ಹಿ ವ್ಯತನೋತ್ಸಹಸ್ರಗಣಿತಾಂ ತತ್ರಾಪಿ ಯೇ ನರ್ತನ್ತೈ-
ಸ್ತ್ವಚ್ಚೇದಂ ದಶಕಂ ಪಠನ್ತಿ ಭುವಿ ತೇ ವೈಕುಣ್ಠಮೇವಾಪ್ನುಯುಃ ||

ತಾ|| ಸ್ವರೂಪೈಕ್ಯವಂಪಡೆದು ನಿಂತು ಭಗವದನುಭವವಂ ಮಾಡಲು ಆಶೆಯಿಂದ, ಪುಂಡರೀಕಾಕ್ಷನಾದ ಅವನನ್ನು ಕುರಿತು ಶ್ರೀಕುರುಕಾಪುರೀಶ್ವರರಾದ ಶಠಾರಿಮುನಿವರ್ಯರು ರಚಿಸಿದ ದಿವ್ಯದ್ರಾವಿಡ ಸೂಕ್ತಿರೂಪವಾದ ಸಹಸ್ರ ಪದ್ಯಮಾಲೆಯೊಳು ಈ ದಶಕವನ್ನು ಇಂಪಾಗಿ ಹಾಡಿ ನರ್ತನಮಾಡಬಲ್ಲವರು ಪರಮಪದವನ್ನು ಸೇರುವರು—(ಎಂದು ಪಠನ ಫಲವನ್ನು ಸೂಚಿಸುತ್ತಾರೆ.)

( ದ್ರ–ಉ–ಸಂ || )—

ತದ್ವೇಷಜಾತ್ಸ ಹರಿನಾಮಕಥಾಪ್ರಸಂಗಾತ್
ಸಂಜ್ಞಾಮುಪೇತ್ಯ ಮುನಿರುದ್ಭಟ ದುಃಖಬೋಧಃ |
ಆಪತ್ಸಖತ್ವಮುಖವಾಚಕತಸ್ತ್ರಮುಚ್ಚೈ-
ರಾಕ್ರುಶ್ಯ ವಾಞ್ಛಿತಮಯಾಚತ ಸಪ್ತಮೇನ ||

( ದ್ರ–ಉ–ತಾ–ರ || )—

ಆಪದ್ಬನ್ಧುತ್ವದೀಪ್ತಂ ನಿರವಧಿಕಮಹಾನನ್ದದಂ ಕ್ರಾನ್ತಲೋಕಂ
ದುರ್ದರ್ಶಂ ದೇವತಾನಾಂ ಪಿತರಮನುಸಧಿಂ ಸರ್ವಭೂತಾನ್ತರಸ್ಥಮ್ |
ಪೂರ್ಣಜ್ಞಾನೈಕಮೂರ್ತಿಂ ಧೃತಶುಭತುಳಸಿಂ ಚಕ್ರನಾಥಂ ಶ್ರುತೀನಾಂ
ವಿಶ್ರಾನ್ತಿಸ್ಥಾನಮೀಶಂ ವಿಶದಬಹುಗುಣಂ ಪ್ರಾಹ ಖಿನ್ನಶ್ಶಠಾರಿಃ ||

ದುಶ್ಶೀಲೋ ಮಾಂಸಚಕ್ಷುರ್ನಿರವಧಿದುರಿತೋ ವೀತಲಜ್ಜೋ ವಿಲೋಲಃ
ಪ್ರೇಕ್ಷಾಹೀನೋಽನ್ಯಸಂಗಾತ್ಕೃತಮಪಿ ಲಘಯನ್ ಶೀಲಮನ್ತರ್ದಧಾನಃ |
ಕರ್ಮಜ್ಞಾನಾದಿಶೂನ್ಯೋ ನಿರುಪಧಿವಿಹಿತಾಂ ಜ್ಞಾನದೃಷ್ಟಿಂ ವಿನಿನ್ದನ್
ಪ್ರಖ್ಯಾಪ್ಯೈವಂ ಸ್ವದೋಷಾನ್ ಪತಿಗುಣರಸಿಕಸ್ತದ್ದಿದೃಕ್ಷಾಂ ಚ ಚಕ್ರೇ ||

(ಈ ಸಪ್ತಮದಶಕದ ಸಾರಾಂಶ)—

ಈ ಏಳನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಸಾಕ್ಷಾತ್ತಾಗಿ ಭಗವನ್ತನನ್ನು ಕಣ್ಣಿನಿಂದ ಕಂಡು ಅನುಭವಿಸಬೇಕೆಂಬ ಉತ್ಕಟವಾದ ಆಶೆಯಿಂದ ಮೊರೆಯಿಡುತ್ತಾ, ಅವನ ಆಪತ್ಸಖತ್ವ–ನಿರವಧಿಕಾನನ್ದದಾಯಿತ್ವ–ವಿಕ್ರಾನ್ತಲೋಕತ್ವಾದಿ ಮಹಾಗುಣಗಳನ್ನೆಲ್ಲಾ ಕೀರ್ತನಮಾಡಿ, ಜ್ಞಾನದೃಷ್ಟಿಯಿಂದ ಅನುಭವವು ಸಾಲದೆಂದು ಸಾಕ್ಷಾತ್ಸಂಶ್ಲೇಷವನ್ನೇ ಅಪೇಕ್ಷಿಸಿ ಇರುತ್ತಾರೆ.

ಶ್ರೀಃ

# ಚತುರ್ಥಶತಕದಲ್ಲಿ—ಅಷ್ಟಮದಶಕ.

(ಏಜಾಳುಮಿತ್ತ್ಯಯೋನುಮ್—)

(ಈ ದಶಕದಲ್ಲಿ ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ಸರ್ವೇಶ್ವರನಿಗೆ ಅನಾದರಣೀಯವಾದ ಆತ್ಮಾತ್ಮೀಯ ಸಮಸ್ತವಸ್ತುಗಳೂ ತ್ಯಾಜ್ಯವೆಂದು ಹೇಳುತ್ತಾರೆ.)

(೧) ಏಜಾಳುಮಿತ್ತ್ಯಯೋನುಮ್ ತಿಶೈಮುಕನುಮ್
ತಿರುಮಕಳುಮ್,
ಕೂಜಾಳುಮ್ ತನಿಯುಡಮ್ಬನ್ ಕುಲಮ್‌ಕುಲಮಾ
ಅಶುರರ್‌ಕಳ್ಳೈ,
ನೀಜಾಕುಮ್‌ಪಡಿಯಾಕ ನಿರುಮಿತ್ತು ಪ್ಪಡೈತೊಟ್ಟ,
ಮಾಜಾಳರ್ ಕವರಾದ ಮಣಿಮಾಮ್ಮೈ ಕುತ್ತ್ಯವಿಲಮ್.

ಪ್ರ॥ ಏಱು ಆಳುಮ್–ವೃಷಭವಾಹನನಾದ, ಇತ್ತ್ಯಯೋನುಮ್–ಈಶ್ವರನೆಂಬ ನಾಮಧೇಯವುಳ್ಳ ರುದ್ರನೂ, ತಿಶೈಮುಕನುಮ್ – ಚತುರ್ಮುಖನಾದ ಬ್ರಹ್ಮನೂ, ತಿರುಮಕಳುಮ್–ಲಕ್ಷ್ಮೀದೇವಿಯೂ, (ನಿತ್ಯಾನಪಾಯಿನಿಯಾದ ಶ್ರೀದೇವಿಯೂ), ಕೂಱು ಆಳುಮ್–ಭಾಗಮಾಡಿಕೊಂಡು ತಮ್ಮ ತಮ್ಮ ಸ್ಥಾನಗಳೆಂದು ಅಭಿಮಾನಿಸಿರುವ, ತನಿ–ಅದ್ವಿತೀಯವಾಗಿ ಅಪ್ರಾಕೃತವಾದ, ಉಡಮ್ಬನ್ – ದಿವ್ಯಶರೀರವುಳ್ಳವನಾಗಿಯೂ, ಕುಲಮ್ ಕುಲಮಾ-ಗುಂಪುಗುಂಪಾಗಿ, ಅಶುರರ್‌ಕಳ್ಳೈ–ಅಸುರರನ್ನು, ನೀಱಾಕುಮ್ ಪಡಿಯಾಕ–ಧೂಳಿ ಧೂಳಿಯಾಗುವಂತೆ (ನಷ್ಟವಾಗುವಂತೆ), ನಿರುಮಿತ್ತು – ಸಂಕಲ್ಪಿಸಿ, ಪಡೈತೊಟ್ಟ – ಆಯುಧವನ್ನು ಧರಿಸಿ ಕಾರ್ಯಮಾಡಿದ, ಮಾಱಾಳರ್–ಶತ್ರುಧ್ವಂಸಕನಾಗಿಯೂ ಇರುವ ಸ್ವಾಮಿಯು, ಕವರಾದ–ಅಪೇಕ್ಷಿಸದೆ ಇರುವ, ಮಣಿಮಾಮ್ಮೈ–ಕಾನ್ತಿಯುಳ್ಳ ಶರೀರದಲಾವಣ್ಯದಿಂದ (ಮಣಿವರ್ಣದಿಂದ), ಕುತ್ತ್ಯವು ಇಲಮ್–ನಮಗೆ ಪ್ರಯೋಜನವಿಲ್ಲ. (ಅದು ನಿಷ್ಫಲವೆಂದು ಭಾವವು.)

(ಸ-ಗಾ-ರ || )—

ಈಶಾನೋ ವೃಷಭಧ್ವಜೋಽಪಿ ಚತುರಾಸ್ಯೋಽಪಿ ಸ್ವಯಂ ಶ್ರೀರಪಿ
ಸ್ವಸ್ವಸ್ಥಾನಮಿತಿ ಪ್ರಿಯಂ ವಪುರಹೋ! ಯಸ್ಯಾಶ್ರಿತಾಸ್ತಸ್ಯ ತು |
ರಕ್ಷೋಽಬ್ಧನ್ನವಿನಾಶಕಸ್ಯ ಚ ಹರೇರ್ನೋಽಚೇತ್ಪ್ರಿಯಂ ಕಿಂ ಫಲಂ
ಸೌನ್ದರ್ಯೇಣ ಮಹೋಜ್ಜ್ವಲೇನ ಮಣಿವಚ್ಚಾಸ್ಮಾಕಮಙ್ಗೇಷು ವಾ? ||

ತಾ|| ವೃಷಭವಾಹನನಾದ ರುದ್ರನೂ, ಚತುರ್ಮುಖನಾದ ಬ್ರಹ್ಮನೂ, ಸಾಕ್ಷಾಲ್ಲಕ್ಷ್ಮೀದೇವಿಯೂ ಕೂಡ ತಮ್ಮ ತಮ್ಮ ಸ್ಥಾನಗಳೆಂದು ಭಾಗಮಾಡಿ ಅಭಿಮಾನಿಸಿಕೊಂಡಿರುವ ಅವಯವಗಳುಳ್ಳ ಅಪ್ರಾಕೃತ ದಿವ್ಯಶರೀರದೊಡನೆ ಕೂಡಿದವನಾಗಿಯೂ, ಅಸುರ ಸಂಘಗಳನ್ನೆಲ್ಲಾ ಧೂಳಿಧೂಳಿಯಾಗುವಂತೆ ನಾಶಪಡಿಸಿದ ದಿವ್ಯಾಯುಧಧರನಾಗಿಯೂ ಇರುವ ಸ್ವಾಮಿಗೆ ಪ್ರಿಯವಾಗದೆ ಇರುವ ನಮ್ಮ ಶರೀರದ ಕಾನ್ತಿಯಿಂದ ನಮಗೆ ಯಾವಪ್ರಯೋಜನವೂ ಇಲ್ಲ.

(೨) ಮಣಿಮಾಮೈ ಕುತ್ತ್ರವಿಲ್ಲಾ ಮಲರ್ಮಾದರುತ್ತ್ರಮಾರ್ಬನ್,
ಅಣಿಮಾನತ್ತಡವರೈ ತೋಳ್ ಅಡಲಾಳಿ ತ್ತಡಕ್ಕೈಯನ್,
ಪಣಿಮಾನಮ್ ಪಿೞೈಯಾಮೇ ಯಡಿಯೇನೈ ಪ್ಪಣಿಕೊಣ್ಡ,
ಮಣಿಮಾಯನ್ ಕವರಾದ ಮಡನೆಞ್ಜಾಲ್ ಕುತ್ತ್ರವಿಲಮೇ.

ಪ್ರ|| ಮಣಿ ಮಾಮೈ-(ನಿತ್ಯಸಂಶ್ಲೇಷದಿಂದ) ಉಜ್ಜ್ವಲಮಣಿಯ ಕಾನ್ತಿಗೆ, ಕುತ್ತ್ರವು ಇಲ್ಲಾ-ಸಂಕೋಚವಿಲ್ಲದೆ ಇರುವ, ಮಲರ್ಮಾದರ್ - ಪದ್ಮೋದ್ಭವೆಯಾದ ಲಕ್ಷ್ಮೀದೇವಿಯು, ಉತ್ತ್ರ-ನಿತ್ಯವಾಸಮಾಡುವ, ಮಾರ್ಬನ್-ವಕ್ಷಸ್ಥಲವುಳ್ಳ, ಅಣಿ ಆಭರಣಶೋಭಿತವಾದ, ಮಾನ-ವಿಶಾಲವಾದ, ತಡ-ಸುವೃತ್ತವಾದ, ವರೈ-ಉನ್ನತವಾದ ಗಿರಿಯಂತೆ ಇರುವ, ತೋಳ್-ತೋಳುಗಳುಳ್ಳವನಾಗಿಯೂ, ಅಡಲ್ ಆೞಿ-ಶತ್ರುನಾಶಕವಾದ ಚಕ್ರವನ್ನು ಧರಿಸಿರುವ, ತಡಕ್ಕೈಯನ್-ಮಹಾಹಸ್ತಗಳುಳ್ಳವನಾಗಿಯೂ, ಪಣಿಮಾನಮ್-ಕೈಂಕರ್ಯವೃತ್ತಿಗಳಲ್ಲಿ ಒಂದು ಗೌರವವೂ, ಪಿೞೈಯಾಮೇ-ತಪ್ಪದಂತೆ, ಅಡಿಯೇನೈ-ದಾಸಭೂತನಾದ ನನ್ನನ್ನು, ಪಣಿಕೊಣ್ಡ - ಕೈಂಕರ್ಯದಲ್ಲಿ ನಿಯಮಿಸಿದ, ಮಣಿಮಾಯನ್ - ನೀಲಮಣಿವರ್ಣನಾದ ಮಾಯಾಚೇಷ್ಟಿತನಾಗಿಯೂ ಇರುವ ಸ್ವಾಮಿಯು, ಕವರಾದ - ಅಪೇಕ್ಷಿಸದೆ ಇರುವ, ಮಡನೆಞ್ಜಾಲ್-ವಿಧೇಯವಾದ ಮನಸ್ಸಿನಿಂದ, ಕುತ್ತ್ರವಿಲಮ್-ನಮಗೆ ಯಾವ ಪ್ರಯೋಜನವೂ ಇಲ್ಲ (ಅನ್ತಹ ಮನಸ್ಸು ನಿಷ್ಫಲವಾದುದು.)

(ಸ–ಗಾ–ರ ||)—

ಯಸ್ಯೋರಸ್ಯನಿಶಂ ವಸತ್ಯಹಹ! ಸಾ ನಿತ್ಯೋಜ್ಜ್ವಲಶ್ರೀರಪಿ
ಶ್ರೀದೇವೀ ಕಮಲಾ ತು ಯಸ್ಯ ಚ ಭುಜೌ ವೃತ್ತೌ ಶುಭೌ ಪೀವರೌ |
ಯಶ್ಚಕ್ರಂ ಕರತೋ ಬಿಭರ್ತ್ಯರಿಹರಂ ತೇನಾಸ್ಮಿ ಸೇವಾವಿಧೌ
ನಿತ್ಯಂ ಚಾಪಿ ನಿಯೋಜಿತಾ! ಮಮ ಮನಸ್ತಸ್ಯಾಪ್ರಿಯಂ ನಿಷ್ಫಲಮ್ ||

ತಾ|| ಉಜ್ಜ್ವಲಮಣಿವರ್ಣೆಯಾದ ಲಕ್ಷ್ಮೀದೇವಿಯನ್ನು ವಕ್ಷಸ್ಥಲದಲ್ಲಿ ಧರಿಸಿರುವವನಾಗಿಯೂ, ಪರ್ವತಸದೃಶ ಬಾಹುಗಳುಳ್ಳವನಾಗಿಯೂ, ಚಕ್ರಪಾಣಿಯಾಗಿಯೂ, ನನ್ನನ್ನು ಸಕಲ ಕೈಂಕರ್ಯಗಳಲ್ಲೂ ನಿಯಮಿಸಿದವನಾಗಿಯೂ ಇರುವ ಮಣಿವರ್ಣನಾದ ಸ್ವಾಮಿಗೆ ಅನಭಿಮತವಾದ ನನ್ನ ಮನಸ್ಸು (ಎಷ್ಟು ವಿಧೇಯವಾಗಿದ್ದರೂ) ನನಗೆ ನಿರರ್ಥಕವಾದುದು.

(೩) ಮಡನೆಞ್ಜಾಲ್ ಕುತ್ತೈವಿಲ್ಲಾ ಮಕಳ್ ತಾಯ್
ಶೆಯ್ದುರುಪೇಯ್‌ಚ್ಚಿ,
ವಿಡನಞ್ಜ ಮುಲೈಶುವೈತ್ತ ಮಿಕುಞಾನ ಚ್ಚಿಱುಕುೞವಿ,
ಪಡನಾಕತ್ತಣೈಕ್ಕಿಡನ್ದ ಪರುವರೈತ್ತೋಳ್
ಪರಮ್ ಪುರುಡನ್,
ನೆಡುಮಾಯನ್ ಕವರಾದ ನಿತ್ತೈವಿನಾಲ್ ಕುತ್ತೈವಿಲಮೇ

ಪ್ರ|| ಮಡನೆಞ್ಜಾಲ್ – (ಶಿಶುವಿನಲ್ಲಿ ಪ್ರೀತಿಯುಳ್ಳ) ಒಳ್ಳೇಮನಸ್ಸಿನಿಂದ, ಕುತ್ತೈವಿಲ್ಲಾ–ಯಾವನ್ಯೂನತೆಯೂ ಇಲ್ಲದ, ತಾಯ್‌ಮಕಳ್–(ಯಶೋದೆಯೆಂಬ) ತಾಯಿಯಂತೆ, ಶೆಯ್ದು – ತನ್ನನ್ನು ವೇಷದಿಂದ ಮರೆಸಿಕೊಂಡುಬಂದ, ಒರು ಪೇಯ್‌ಚ್ಚಿ–ಕೃತ್ರಿಮದಲ್ಲಿ ಅದ್ವಿತೀಯೆಯಾದ ರಾಕ್ಷಸಿಯ, ವಿಡನಞ್ಜಮ್‌ಮುಲೈ–ವಿಷಮಯಸ್ತನ್ಯವುಳ್ಳ ಮೊಲೆಯನ್ನು, ಶುವೈತ್ತ– ಹೀರಿ ಅವಳನ್ನು ಕೊಂದ, ಮಿಕು ಞಾನಮ್–ಅತ್ಯಧಿಕವಾದ ದಿವ್ಯಜ್ಞಾನವುಳ್ಳ, ಶಿಱುಕುೞವಿ–ಮುಗ್ಧಶಿಶುವಾದ, ಪಡನಾಕತ್ತಣೈ–ವಿಶಾಲವಾದ ಫಣೆಯುಳ್ಳ ನಾಗಶಯನದಲ್ಲಿ, ಕಿಡನ್ದ–ಶಯನಮಾಡಿದ, ಪರುವರೈತ್ತೋಳ್–ಮಹಾಪರ್ವತಸದೃಶವಾದ ಬಾಹುಗಳುಳ್ಳ, ಪರಮ್‌ಪುರುಡನ್–ಪರಮಪುರುಷನಾದ, ನೆಡುಮಾಯನ್–ನಿರವಧಿಕಾಶ್ಚರ್ಯ ಗುಣಚೇಷ್ಟಿತಗಳುಳ್ಳ ಶ್ರೀಕೃಷ್ಣನು, ಕವರಾದ–ಅಪೇಕ್ಷಿಸದೆ ಇರುವ, ನಿತ್ತೈವಿನಾಲ್–ಸ್ತ್ರೀತ್ವಪೂರ್ತಿ (ತಾರುಣ್ಯಾದಿ–ಲಜ್ಜಾದಿ–ಗುಣಪೂರ್ತಿ) ಯಿಂದ, ಕುತ್ತೈವು ಇಲಮ್ – ನಮಗೆ ಏನೂ ಪ್ರಯೋಜನವಿಲ್ಲ.

(ಸ-ಗಾ-ರ || )—

ವತ್ಸಪ್ರೀತಿಯುತಾನ್ಮಾತರಮಭೂದ್ಧ್ವಾಽನುಕೃತ್ಯ ಸ್ವಯಂ
ಮಾಯಾಪೂತನಿರೂಪಿಣೀಂ ವಿಷಮಯಸ್ತನ್ಯಾ ಪುರಾ ಯಾ ತು ತಾಮ್ |
ಹನ್ತಾ ಜ್ಞಾನನಿಧೇಶ್ಶಿಶೋರ್ದೃಢಭುಜಸ್ಯಾನನ್ತಶಯ್ಯಾಭೃತಃ
ಕೃಷ್ಣಸ್ಯಾಪ್ರಿಯಮೇವ ಯತ್ಕಿಲ ತತಃ ಸ್ತ್ರೀತ್ವಾತ್ಫಲಂ ಕಿಂ ಮಮ ? ||

ತಾ|| ಶಿಶುವಿನಲ್ಲಿ ಅತ್ಯನ್ತಪ್ರೀತಿಯುಳ್ಳ ಯಶೋದೆಯಂತೆ ವೇಷವಂ ಧರಿಸಿಕೊಂಡು ಬಂದ ಪೂತನೆಯೆಂಬ ರಾಕ್ಷಸಿಯ ವಿಷಮಯವಾದ ಸ್ತನವನ್ನು ಹೀರಿ ಅವಳನ್ನು ಕೊಂದ ದಿವ್ಯಜ್ಞಾನನಿಧಿಯಾದ ಮುಗ್ಧಶಿಶುವಾಗಿಯೂ, ಶೇಷಶಾಯಿಯಾಗಿಯೂ, ಮಹಾಪರ್ವತಸದೃಶ ಬಾಹುಯುಕ್ತನಾಗಿಯೂ ಇರುವ ಪರಮಪುರುಷನಾದ ನಿರವಧಿಕಾಶ್ಚರ್ಯಗುಣಚೇಷ್ಟಿತನು (ಶ್ರೀಕೃಷ್ಣನು) ಆಶೆಪಡದೆ ಇರುವ ಸ್ತ್ರೀತ್ವ ಪೂರ್ತಿಯಿಂದ ನಮಗೇನುಪ್ರಯೋಜನ? (ಅವನಿಗೆ ಭೋಗ್ಯವಲ್ಲದ ನಮ್ಮ ಸ್ತ್ರೀತ್ವಪೂರ್ತಿಯು ನಿರರ್ಥಕವಾದುದೆಂದು ತಾತ್ಪರ್ಯ.)

(೪) ನಿಱೈವಿನಾಱ್ ಕುಱೈವಿಲ್ಲಾ ನೆಡುಮ್ಪಣೈತ್ತೋಳ್
ಮಡಪ್ಪಿನ್ನೈ,
ಪೊಱೈಯಿನಾಲ್ ಮುಲೈಯಣೈವಾನ್
ಪೊರುವಿಡೈಯೇೞಡರ್ತ್ತುಗನ್ದ,
ಕಱೈಯಿನಾರ್ ತುವರುಡುಕ್ಕೈ ಕಡೈಯಾವಿನ್
ಕೞಿಕೋಱ್ಕೈ,
ಶಱೈಯಿನಾರ್ ಕವರಾದ ತಳಿರ್ನಿಱತ್ತಾಲ್ ಕುಱೈವಿಲಮೇ.

ಪ್ರ|| ನಿಱೈವಿನಾಲ್ - ಸ್ತ್ರೀತ್ವಪೂರ್ತಿಯಿಂದ, ಕುಱೈವಿಲ್ಲಾ - ಯಾವ ನ್ಯೂನತೆಯೂ ಇಲ್ಲದ, ನೆಡುಮ್ಪಣೈತ್ತೋಳ್ - ದೀರ್ಘವಾಗಿ ಸುವೃತ್ತವಾದ ಬಾಹುಗಳುಳ್ಳ, ಮಡಪ್ಪಿನ್ನೈ-ಭವ್ಯೆಯಾದ ನಪ್ಪಿನ್ನೈಯೆಂಬ ನೀಳಾದೇವಿಯ, ಮುಲೈ-ಸ್ತನಗಳನ್ನು, ಅಣೈವಾನ್-ಆಲಿಂಗಿಸುವುದಕ್ಕಾಗಿ, ಪೊಱೈಯಿನಾಲ್-(ತನ್ನ) ಪರಾಕ್ರಮದಿಂದ, ಪೊರುವಿಡೈ ಏೞ್-ಯುದ್ಧೋನ್ಮುಖವಾದ ವೃಷಭಗಳು ಏಳನ್ನೂ, ಅಡರ್ತ್ತು ಉಗನ್ದ-ಧ್ವಂಸಮಾಡಿ ಸನ್ತೋಷಿಸಿದ್ದ, ಕಱೈಯಿನ್ ಆರ್-ಕರೆಗಳಿಂದ ತುಂಬಿದ, ತುವರುಡುಕ್ಕೈ-ಕೊಳೆಯಾದ (ತೋಲ್) ಬಟ್ಟೆಯನ್ನೂ, ಕಡೈಯಾವಿನ್-(ಹಾಲುಕರೆಯುವ) ಬಿದುರುಪಾತ್ರವನ್ನೂ, ಕೞಿಕೋಲ್-ಪಶುಗಳನ್ನು ಓಡಿಸುವ

ಕೋಲನ್ನೂ, ಕ್ಕೈ-ಕೈಯಲ್ಲಿ ಧರಿಸಿರುವ, ಶತ್ತ್ರೈಯಿನಾರ್–ನಡುವಿನಲ್ಲಿ ಕಟ್ಟಿಕೊಂಡಿರುವ ಗೆಜ್ಜೆಮಣಿಗಳುಳ್ಳ ಸ್ವಾಮಿಯು (ಶ್ರೀಕೃಷ್ಣನು), ಕವರಾದ – ಅಪೇಕ್ಷಿಸದೆ ಇರುವ, ತಳಿರ್ ನಿಱತ್ತಾಲ್–ತಳಿರಿನಂತೆ ಭೋಗ್ಯವಾದ ಶರೀರದ ವರ್ಣದಿಂದ, ಕುತ್ತ್ರೈವಿಲಮ್–ನಮಗೆ ಯಾವಪ್ರಯೋಜನವೂ ಇಲ್ಲ.

(ಸ–ಗಾ–ರ ||)—

ಸ್ತ್ರೀಸಾದ್ಗುಣ್ಯಯುತಾಂ ಸುಬಾಹುಯುಗಳಾಂ ···ಳಾಂ ಶುಭಾಂ ಸುಸ್ತನೀಂ
ಭೋಕ್ತುಂ ಯೋ ವೃಷಸಪ್ತಕಂ ಪ್ರಮಥಯನ್ ಹೃಷ್ಟೋ ವಿವರ್ಣಾಮ್ಬರಃ|
ಬಿಭ್ರಾಣೋಽಪಿ ಚ ದುಗ್ಧಪಾತ್ರಮಪಿ ಯೋ ದಣ್ಡಂ ಚ ಘಣ್ಟಾಮಣಿಂ
ತಸ್ಯೇದಂ ಯದಿ ನ ಪ್ರಿಯಂ ಮಮ ತನೋರ್ವರ್ಣಾಚ್ಛಭಾಕ್ಕಿಂ ಫಲಮ್?||

ತಾ|| ಸ್ತ್ರೀತ್ವಪೂರ್ತಿಯುಳ್ಳ ಸುದೀರ್ಘಬಾಹುಯುಕ್ತೆಯಾದ ನೀಳಾದೇವಿಯ ಸ್ತನಾಲಿಂಗನಕ್ಕಾಗಿ ತನ್ನ ಮಹಾಬಲದಿಂದ ಸಪ್ತವೃಷಭಗಳನ್ನೂ ಮರ್ದನಮಾಡಿ ತಾನು ಅವಳನ್ನು ಹೊಂದಿ ಸಂತೋಷಿಸಿದ ಪಶುಪಾಲಕನಾದ (ಸಕಲವಿಧಗೋಪ ಸಾಮಗ್ರೀಸಹಿತನಾದ) ಶ್ರೀಕೃಷ್ಣನಿಗೆ ಅಭಿಮತವಲ್ಲದ ಶರೀರದ ದಿವ್ಯಕಾನ್ತಿಯಿಂದ ನಮಗೇನುಪ್ರಯೋಜನ ?

(೫) ತಳಿರ್‌ನಿಱತ್ತಾಲ್ ಕುತ್ತ್ರೈವಿಲ್ಲಾ ತ್ತನಿಚ್ಚಿ ತ್ತ್ರೈಯಿಲ್
ವಿಳಪ್ಪೆಯ್ದ,
ಕಿಳಿಮೊೞಿಯಾಳ್ ಕಾರಣಮಾ ಕ್ಕಿಳರರಕ್ಕನ್ನಕರೇರಿತ್ತ,
ಕಳಿಮಲರ್ ತುೞಾಯಲಙ್ಗಲ್ ಕಮೞ್‌ಮುಡಿಯನ್
ಕಡಲ್‌ಞಾಲತ್ತು,
ಅೞಿಮಿಕ್ಕಾನ್ ಕವರಾದ ವೞಿವಿನಾಲ್ ಕುತ್ತ್ರೈವಿಲಮೇ.

ಪ್ರ|| ತಳಿರ್‌ನಿಱತ್ತಾಲ್–ಚಿಗುರಿನಂತೆ ದರ್ಶನೀಯವಾಗಿಯೂ ಸುಕುಮಾರವಾಗಿಯೂ ಇರುವ ಬಣ್ಣದಿಂದ, ಕುತ್ತ್ರೈವಿಲ್ಲಾ–ಪರಿಪೂರ್ಣೆಯಾದ, ತನಿಚ್ಚಿತ್ತ್ರೈಯಿಲ್–(ರಾಕ್ಷಸಿಗಳ ಮಧ್ಯದಲ್ಲಿ) ಏಕಾಕಿನಿಯಾಗಿ ಸೆರೆಯಲ್ಲಿದ್ದು, ವಿಳಪ್ಪೆಯ್ದ (ತಾನು ಸೆರೆಯಲ್ಲಿದ್ದು ಲೋಕವನ್ನೆಲ್ಲಾ ಬನ್ಧದಿಂದ ಬಿಡಿಸುವವಳೆಂಬ) ಪ್ರಸಿದಿಯುಳ್ಳ, ಕಿಳಿಮೊೞಿಯಾಳ್ – ಗಿಣಿಯಂತೆ ಮಧುರವಾದ ಭಾಷಣವುಳ್ಳ ಸೀತಾದೇವಿಯು, ಕಾರಣಮಾ–ಕಾರಣವಾಗಿ (=ಸೀತಾದೇವಿಗೋಸ್ಕರ), ಕಿಳರ್–ದೌರಾತ್ಮ್ಯದಲ್ಲಿ ಉದ್ಧತನಾದ, ಅರಕ್ಕನ್–ರಾವಣನ, ಕೀೞ್‌ನಕರ್–ಐಶ್ವರ್ಯ ಪರಿಪೂರ್ಣ

ವಾದ ನಗರವನ್ನು, ಎರಿತ್ತ-ದಗ್ಧಮಾಡಿದ, ಕಳಿಮಲರ್-ಮಧುಸ್ಯನ್ದಿಯಾಗಿ ವಿಕಸಿತವಾದ, ತುೞಾಯಲಙ್ಗಲ್ - ತುಳಸೀಮಾಲೆಯಿಂದ, ಕಮೞ-ಪರಿಮಳಭರಿತವಾದ, ಮುಡಿಯರ್-ಕಿರೀಟವನ್ನು ಧರಿಸಿರುವ, ಕಡಲ್ಞಾಲತ್ತು-ಸಮುದ್ರದಿಂದ ಪರಿವೃತವಾದ ಭೂಮಿಯಲ್ಲಿ, ಅಳಿಮಿಕ್ಕ-ಸೌಮ್ಯತೆಯು ಅಧಿಕವಾಗಿ ಪ್ರಕಾಶಿಸುವಂತೆ ಇದ್ದ (ಶ್ರೀರಾಮರೂಪಿಯಾದ) ಸ್ವಾಮಿಯು, ಕವರಾದ-ಅಪೇಕ್ಷಿಸದೆ ಇರುವ, ಅಱಿವಿನಾಲ್-(ನಮ್ಮ) ಜ್ಞಾನದಿಂದ, ಕುಱ್ಱಮಿಲವು-ಯಾವ ಪ್ರಯೋಜನವೂ ಇಲ್ಲ.

( ಸ-ಗಾ-ರ || )—

ಪೂರ್ಣಾಂ ಪಲ್ಲವಶೋಭಯಾಽಪಿ ಚ ಪೃಥಕ್ಕಾರಾಗೃಹಸ್ಥಾಂ ಚ ತಾಂ
ವಿಖ್ಯಾತಾಂ ಶುಕಭಾಷಿತಾಂ ಪುನರಪಿ ಪ್ರಾಪ್ತುಂ ಚ ರಕ್ಷೋಽಧಿಪಮ್ |
ಹತ್ವಾ ತನ್ನಗರೀಂ ಪ್ರದಹ್ಯ ತುಳಸೀಸೌಗನ್ಧ್ಯಮೌಳೇರ್ಹರೇ-
ರ್ಭೂಸಾಮ್ರಾಜ್ಯಭೃತಃ ಪ್ರಿಯಂ ನ ಯದಿ ತಜ್ಜ್ಞಾನಂ ಚ ಮೇ ನಿಷ್ಫಲಮ್||

ತಾ|| ಪಲ್ಲವಶೋಭೆಯಿಂದ ಪೂರ್ಣೆಯಾದವಳಾಗಿಯೂ, ತಾನು ಏಕಾಕಿನಿಯಾಗಿ ಸೆರೆಯಲ್ಲಿದ್ದು ಎಲ್ಲರ ಬಂಧವನ್ನೂ ಬಿಡಿಸುವವಳಾಗಿಯೂ, ಶುಕಭಾಷಿತೆಯಾಗಿಯೂ ಇರುವ ಸೀತಾದೇವಿಗೋಸ್ಕರ ರಾವಣನನ್ನು ಧ್ವಂಸಮಾಡಿ ಅವನ ನಗರವನ್ನೂ ದಹಿಸಿದ—ದಿವ್ಯಕಿರೀಟಧಾರಿಯಾದ ಸೌಮ್ಯಮೂರ್ತಿಯಾದ ಶ್ರೀರಾಮನಿಗೆ ಅಭಿಮತವಾಗದೆ ಇರುವ ನಮ್ಮ ಜ್ಞಾನದಿಂದ ಏನುಪ್ರಯೋಜನ ?

(೬) ಅಱಿವಿನಾಲ್ ಕುಱ್ಱಮಿಲ್ಲಾ ವಕಲ್ಞಾಲತ್ತವರಱಿಯ,
ನೆಱಿಯೆಲ್ಲಾಮೆಡುತ್ತುರೈತ್ತ ನಿಱೈಞಾನತ್ತೊರು ಮೂರ್ತ್ತಿ,
ಕುಱಿಯ ಮಾಣುರುವಾಕಿ ಕೊಡುಮಾಕೊಳಾಲ್
ನಿಲಮಾಕೊಣ್ಡ,
ಕಿಱಿಯಮ್ಮಾನ್ ಕವರಾದ ಕಿಳರೊಳಿಯಾಲ್ ಕುಱ್ಱಮಿಲಮೇ.

ಪ್ರ|| ಅಱಿವಿನಾಲ್ - ಜ್ಞಾನಸಂಪಾದನದ ವಿಷಯದಲ್ಲಿ, ಕುಱ್ಱಮಿಲ್ಲಾ-ಮನಸ್ಸಿನಲ್ಲಿ ಆಶೆಯೇ ಇಲ್ಲದಷ್ಟು ಅಜ್ಞರಾದ, ಅಕಲ್ಞಾಲತ್ತವರ್-ವಿಸ್ತೀರ್ಣವಾದ ಭೂಮಿಯಲ್ಲಿ ವಾಸನಾಗಿರುವವರು, ಅಱಿಯ-ತಿಳಿಯುವಂತೆ, ನೆಱಿಯೆಲ್ಲಾಮ್-(ಕರ್ಮಯೋಗಾದಿ ಪ್ರಪತ್ತಿಪರ್ಯನ್ತವಾದ) ಸಕಲೋಪಾಯಗಳನ್ನೂ, ಎಡುತ್ತು

ಉರೈತ್ತ – (ವ್ಯಕ್ತವಾಗುವಂತೆ ತಾನೇ) ಎತ್ತಿ ಉಪದೇಶಿಸಿದ, ನಿಱೈಞ್ಞಾನತ್ತು-ಪರಿಪೂರ್ಣಜ್ಞಾನವುಳ್ಳ, ಒರುಮೂರ್ತ್ತಿ–ಅದ್ವಿತೀಯಮೂರ್ತಿಯಾದ, ಕುಱಿಯ-(ವಾಮನಾವತಾರವಾಗಿ) ಆಕರ್ಷಕರೂಪವುಳ್ಳ, ಮಾಣುರುವಾಕಿ – ಬ್ರಹ್ಮಚಾರಿ ವೇಷದಿಂದ ಕೂಡಿದವನಾಗಿ, ಕೊಡುಮ್ ಕೋಳಾಲ್-ವಂಚನೆಯಿಂದ ದಾನವಂ ಪರಿಗ್ರಹಿಸಿ, ನಿಲಮ್ ಕೊಣ್ಡ-ಭೂಮಿಯನ್ನು ವಶೀಕರಿಸಿದ, ಕಿೞಿ-ಒಳ್ಳೇ ಉಪಾಯವಂತನಾದ, ಅಮ್ಮಾನ್–ಸರ್ವೇಶ್ವರನು, ಕವರಾದ–ಅಪೇಕ್ಷಿಸದೆ ಇರುವ, ಕಿಳರ್ ಒಳಿಯಾಲ್ – ಉಜ್ಜ್ವಲವಾದ ಕಾನ್ತಿಯಿಂದ, ಕುಱೈವು ಇಲಮ್ – (ನಮಗೆ) ಪ್ರಯೋಜನವಿಲ್ಲ.

( ಸ–ಗಾ–ರ || )—

ಜ್ಞಾನಾಪೇಕ್ಷಿತಹೀನಭೂತಲಭುವಾಂ ಸರ್ವಾನುಪಾಯಾನ್ ಹರಿ-
ರ್ದಿವ್ಯಜ್ಞಾನನಿಧಿಶ್ಶುಭಾನುಪದಿಶನ್ ಯೋ ದಿವ್ಯಮೂರ್ತಿಃ ಪುರಾ |
ಆಸೀದ್ವಾಮನರೂಪಧೃಚ್ಚ ಧರಣೀಂ ಯೋ ವಞ್ಚನಾದಗ್ರಹೀತ್
ತನ್ತ್ರಜ್ಞಸ್ಯ ನ ತಸ್ಯ ಚೇತ್ಪ್ರಿಯಮಹೋ ! ಲಾವಣ್ಯತಃ ಕಿಂ ಫಲಮ್ ? ||

ತಾ|| ಜ್ಞಾನಾಪೇಕ್ಷೆಯೇ ಇಲ್ಲದ ಮೂಢಜನರೂ ಕೂಡ ತಿಳಿದು ಉಜ್ಜೀವಿಸುವಂತೆ ಕರ್ಮಯೋಗಾದಿ ಪ್ರಪತ್ತಿಯೋಗಪರ್ಯನ್ತವಾದ ಉಪಾಯಗಳನ್ನೆಲ್ಲಾ ವ್ಯಕ್ತವಾಗಿ ಉಪದೇಶಿಸಿದ (ಗೀತಾಚಾರ್ಯನಾದ) ದಿವ್ಯಜ್ಞಾನಮೂರ್ತಿಯಾಗಿಯೂ, ವಾಮನಾವತಾರ ವೇಷದಿಂದ ಬ್ರಹ್ಮಚಾರಿಯಾಗಿ ವಂಚನೆಯಿಂದ ಭೂಮಿಯನ್ನೆಲ್ಲಾ ವಶೀಕರಿಸಿದ ಉಪಾಯಜ್ಞನಾಗಿಯೂ ಇರುವ ಸರ್ವೇಶ್ವರನಿಗೆ ಅಭಿಮತವಾಗದೆ ಇರುವ ನಮ್ಮ ಉಜ್ಜ್ವಲವಾದ ದೇಹಕಾನ್ತಿಯಿಂದ ಏನುಪ್ರಯೋಜನ ?

(೭) ಕಿಳರೊಳಿಯಾಲ್ ಕುಱೈವಿಲ್ಲಾ ಅರಿಯುರುವಾಯ್
ಕ್ಕಿಳರ್ನ್ದೆೞುನ್ದ,
ಕಿಳರೊಳಿಯ ಇರಣಿಯನದಕಲ್ವಮಾರ್ಬಮ್ ಕೀೞ್ತ್ತುಕನ್ದ,
ವಳರೊಳಿಯ ಕನಲಾೞಿ ವಲಮ್ಬುರಿಯನ್, ಮಣಿನೀಲ
ವಳರೊಳಿಯನ್ ಕವರಾದ ಮಡವರಲ್ಲೈಯಾಲ್
ಕುಱೈವಿಲಮೇ.

ಪ್ರ|| ಮಣಿನೀಲ-ನೀಲಮಣಿಯಂತೆ ಉಜ್ಜ್ವಲವಾದ, ವಳರ್ ಒಳಿಯರ್ಾ-ಅತಿಶಯಿತವಾದ ದೇಹಕಾನ್ತಿಯುಳ್ಳವನಾಗಿ, ಕಿಳರ್ ಒಳಿಯಾಲ್- ಅಭಿವೃದ್ಧವಾದ ಔಜ್ಜ್ವಲ್ಯದಿಂದ, ಕುತ್ರೈವಿಲ್ಲಾ-ಪರಿಪೂರ್ಣವಾದ, ಅರಿಯುರುವಾಯ್-ಸಿಂಹರೂಪಿಯಾಗಿ, ಕಿಳರ್‌ನ್ದು ಎಳುನ್ದು-(ಸ್ತಂಭದಲ್ಲಿ) ಉದ್ಭವಿಸಿ ಎದ್ದು, ಕಿಳರ್ ಒಳಿಯ-ಅಧಿಕವಾದ ತೇಜಸ್ಸುಳ್ಳ, ಇರಣಿಯನದು- ಹಿರಣ್ಯಾಸುರನ, ಅಕಲ್ ಮಾರ್ಬಮ್-ವಿಶಾಲವಾದ ವಕ್ಷಸ್ಸ್ಥಲವನ್ನು, ಕಿೞಿತ್ತು-ಶೀಳಿ, ಉಕನ್ದ-ಸನ್ತುಷ್ಟನಾದ, ವಳರ್ ಒಳಿಯ- ಪ್ರವೃದ್ಧವಾದ ಜ್ವಾಲೆಗಳುಳ್ಳ, ಕನಲ್ ಆೞಿ-ಅಗ್ನಿಸದೃಶವಾದ ಚಕ್ರವನ್ನೂ, ವಲಮ್ಬುರಿಯ್-ಪಾಂಚಜನ್ಯವೆಂಬ ಶಂಖವನ್ನೂ ಧರಿಸಿರುವ ಸ್ವಾಮಿಯು, ಕವರಾದ-ಅಪೇಕ್ಷಿಸದೆ ಇರುವ, ವರಿವಳೈಯಾಲ್-ಗೀರುಗಳುಳ್ಳ ಕೈಬಳೆಗಳಿಂದ, ಕುರೈವಿಲಮ್-(ನಮಗೆ) ಯಾವಪ್ರಯೋಜನವೂ ಇಲ್ಲ.

( ಸ-ಗಾ-ರ || )—

ಸ್ವಾಭಾವ್ಯಾನ್ಮಣಿನೀಲವರ್ಣಸುತನುರ್ದೀಪ್ರೋಜ್ಜ್ವಲಶ್ರೀಧರ-
ಸ್ಸಿಂಹೋಽಭೂಚ್ಚ ಹಿರಣ್ಯಕಾಸುರನುಹಾವಕ್ಷೋ ವಿದೀರ್ಯಪ್ರಿಯಃ |
ಭಕ್ತಾನಾಮಪಿ ಶಙ್ಖಚಕ್ರಭೃದಸೌ ರಕ್ಷಾರ್ಥಮೇವಾಚ್ಯುತ-
ಸ್ತಸ್ಯೇದಂ ಯದಿ ನ ಪ್ರಿಯಂ ವಲಯತಃ ಕಿಂ ಸ್ಯಾತ್ಫಲಂ ಮೇ ಕರೇ? ||

ತಾ|| ನೀಲಮಣಿವರ್ಣನಾಗಿ, ನಿತ್ಯೋಜ್ಜ್ವಲವಾದ ಸಿಂಹರೂಪವನ್ನು ಧರಿಸಿ ಸ್ತಂಭದಿಂದ ಉದ್ಭವಿಸಿ, ಹಿರಣ್ಯಾಸುರನ ವಕ್ಷಸ್ಸ್ಥಲವಂ ಶೀಳಿ ಸನ್ತುಷ್ಟನಾದ ಶಂಖಚಕ್ರಧರನಾಗಿರುವ ಸ್ವಾಮಿಗೆ ಅಭಿಮತವಲ್ಲದ ನಮ್ಮ ಕೈಬಳೆಗಳಿಂದ ನಮಗೇನು ಪ್ರಯೋಜ? (ಅವನಿಗೆ ಸಂಶ್ಲೇಷಕಾಲದಲ್ಲಿ ಭೋಗ್ಯವಾದರೆ ಈ ಬಳೆಗಳು ಸಾರ್ಥಕಗಳೆಂದು ಭಾವವು).

(೮) ವರಿವಳೈಯಾಲ್ ಕುತ್ರೈವಿಲ್ಲಾ ಪ್ಪೆರುಮುೞಕ್ಕಾಲಡೈನ್ದಾರ್ರ್ಕೈ,
ಎರಿಯುೞಲಮ್ ಪುಕಪ್ಪೂದಿ ಯಿರುನಿಲಮುಙ್ ತುಯೆರ್
ತವಿರ್ತ್ತ,
ತೆರಿವರಿಯ ಶಿವ್ಪಿರಮನಮರರ್‌ಕೋನ್ ಪಣಿನ್ದೇತ್ತುವರ್,
ವಿರಿ ಪುಕೞಾನ್ ಕವರಾದ ಮೇಕಲೈಯಾಲ್ ಕುತ್ರೈವಿಲಮೇ.

ಪ್ರ|| ವರಿ-(ಮುಖದಲ್ಲಿ) ದಿವ್ಯಚಿಹ್ನೆಗಳುಳ್ಳ, ವಳ್ಳೈಯಾಲ್-ಶ್ರೀ ಪಾಂಚಜನ್ಯ ವೆಂಬ ಶಂಖದಿಂದ ಉಂಟಾದ, ಕುಱೈವಿಲ್ಲಾ ಪ್ಪೆರುಮುೞಕ್ಕಾಲ್ - ಪರಿಪೂರ್ಣ ವಾದ ಮಹಾಘೋಷದಿಂದ, ಅಡಙ್ಗಾರೈ-ಅನಿಧೇಯರಾದ ಶತ್ರುಗಳನ್ನು, ಎರಿ- ಪ್ರಜ್ವಲಿಸುವ, ಅೞಲಮ್-ಭಯಾಗ್ನಿಯು, ಪುಕ-ಹೃದಯದೊಳು ಪ್ರವೇಶಿಸಿ ನಾಶಪಡಿಸುವಂತೆ, ಊದಿ ಊದಿ, ಮುನ್-ಪೂರ್ವಕಾಲದಲ್ಲಿ, ಇರುನಿಲಮ್-ಮಹಾ ಪೃಥಿವಿಯ, ತುಯರ್ - ಭಾರಕ್ಲೇಶವನ್ನು, ತವಿರ್ತ್ತ - ನಿವಾರಣಮಾಡಿದ, ತೆರಿವರಿಯ - ವಿವೇಚನೆಮಾಡಲು ದುಷ್ಕರವಾದ, ಶಿವನ್-ರುದ್ರನೂ, ಪಿರಮನ್- ಬ್ರಹ್ಮನೂ, ಅಮರರ್ ಕೋನ್-ದೇವೇನ್ದ್ರನೂ, ಪಣಿನ್ದು ಏತ್ತುಮ್-ನಮಸ್ಕರಿಸಿ ಸ್ತೋತ್ರಮಾಡುವಂತೆ, ವಿರಿ ಪುಕೞಾನ್ - ಮಹಾಕೀರ್ತಿಯುಳ್ಳ ಸ್ವಾಮಿಯು, ಕವರಾದ - ಅಪೇಕ್ಷಿಸದ, ಮೇಕಲೈಯಾಲ್-ಕಾಂಚೀದಾಮ (ಒಡ್ಯಾಣ) ದಿಂದ, ಕುಱೈವಿಲಮ್-ನಮಗೆ ಯಾವಪ್ರಯೋಜನವೂ ಇಲ್ಲ.

( ಸ-ಗಾ-ರೆ || )—

ದಿವ್ಯಧ್ವಾನಸುಪಾಂಚಜನ್ಯಮುಖತಶ್ಚಾಸೀದ್ರಿಪೂಣಾಂ ಹೃದಿ
ಪ್ರಜ್ವಾಲೋಽಸ್ಯ ಭಯಾನಲಃ ಕಿಲ ಪುರಾ ಭೂಮ್ಯಾಸ್ತು ಭಾರಾಪಹಮ್ |
ಬ್ರಹ್ಮೇನ್ದ್ರಾದಿಶಿವಾದಯೋಽಪಿ ತಮಿಮಂ ನತ್ವಾ ಸ್ವಯಂ ತುಷ್ಟುವು-
ರ್ಯದ್ಯಸ್ಯಾಸ್ತಿ ನ ತು ಪ್ರಿಯಾ ಸುರುಚಿರಾ ಕಾಂಚೀ ಚ ಮೇ ಸ್ಯಾದ್ವೃಥಾ||

ತಾ|| ದಿವ್ಯಘೋಷವುಳ್ಳ ಪಾಂಚಜನ್ಯದ ಮಹಾಧ್ವನಿಯಿಂದ ಶತ್ರುಗಳ ಹೃದಯವನ್ನೆಲ್ಲಾ ಭೇದಿಸಿ, ಅವರ ಹೃದಯದಲ್ಲಿ ಭಯಾಗ್ನಿಯನ್ನು ಸುರಿದು ಪ್ರಜ್ವಲಿಸುವಂತೆ ಮಾಡಿ ಭೂಭಾರವನ್ನು ನಾಶಪಡಿಸಿ, ಬ್ರಹ್ಮರುದ್ರೇನ್ದ್ರಾದಿಗಳಿಂದ ನಮಸ್ಕಾರಪೂರ್ವಕವಾಗಿ ಸ್ತೋತ್ರಮಾಡಲ್ಪಟ್ಟ ಮಹಾಮಹಿಮೆಯುಳ್ಳ ಸ್ವಾಮಿಗೆ ಅನಭಿಮತವಾದ ಕಾಂಚೀದಾಮದಿಂದ ನಮಗೇನು ಪ್ರಯೋಜನ?

(೯) ಮೇಕಲೈಯಾಲ್ ಕುಱೈವಿಲ್ಲಾ ಮೆಲಿವುಱ್ಱ ವಕಲಲ್ಕುಲ್
ಪೋಕಮಕಳ್ ಪುಕೞ್ತ್ತನ್ದೈ ವಿಱಲ್ವಾಣನ್
ಪುಯಮ್ತುಣಿತ್ತು,
ನಾಕಮಿಶೈ ತ್ತುಯಿಲ್ವಾನ್ ಪೋಲುಲಕೆಲ್ಲಾಮ್
ನನ್ಗೊಡುಙ್ಗ,
ಯೋಕಣೈವಾನ್ ಕವರಾದ ವುಡಮ್ಬಿನಾಲ್ ಕುಱೈವಿಲಮೇ.

ಪ್ರ॥ ಮೇಕಲೈಯಾಲ್ - ಕಾಂಚೀದಾಮದಿಂದ (ವಸ್ತ್ರಾಲಂಕಾರದಿಂದ), ಕುಱೈವಿಲ್ಲಾ - ಪೂರ್ಣೆಯಾದ, ಮೆಲಿವು ಉಱ್ಱ - (ಅನಿರುದ್ಧ ಸಂಶ್ಲೇಷದಿಂದ ಉಂಟಾದ) ಮಹೋತ್ಸಾಹವುಳ್ಳ, ಅಕಲ್ ಅಲ್‌ಕುಲ್ - ವಿಶಾಲವಾದ ನಿತಮ್ಬ ಪ್ರದೇಶದೊಡನೆಕೂಡಿದ, ಪೋಕಮಕಳ್-ಭೋಗಾನುಕೂಲೆಯಾದ ಉಷೆಯೆಂಬ ಕನ್ಯೆಯ, ತನ್ದೈ-ತಂದೆಯೆಂಬ, ಪುಕಳ್-ಪ್ರಖ್ಯಾತಿಯುಳ್ಳ, ವಿಱಲ್-ಶೌರ್ಯವೀರ್ಯಾದಿಗಳಿಂದ ಕೂಡಿದ, ವಾಣ್ಣ-ಬಾಣನ, ಪುಯಮ್-ಭುಜಗಳನ್ನು, ತುಣಿತ್ತು-ಕತ್ತರಿಸಿ, ನಾಕಮಿಶೈ - ನಾಗಪರ್ಯಂಕದಮೇಲೆ, ತುಯಿಲ್‌ವಾನ್‌ಪೋಲ್-ನಿದ್ರೆ ಮಾಡುವವನಂತೆ, ಉಲಕೆಲ್ಲಾಮ್-ಸರ್ವಲೋಕವೂ, ನನ್ಗು ಒಡುಙ್ಗ-(ತನ್ನನ್ನು ಆಶ್ರಯಿಸುವಂತೆ) ಸದ್ವೃತ್ತಿಯಲ್ಲಿ ಸೇರಲು, ಯೋಕು ಅಣೈವಾನ್-ಉಪಾಯ ಚಿನ್ತೆಯಂ ಮಾಡುವವನು, ಕವರಾದ-ಆಶೆಪಡದ, ಉಡಮ್ಬಿನಾಲ್-ಶರೀರದಿಂದ, ಕುಱೈವಿಲಮ್-ನಮಗೆ ಏನೂ ಪ್ರಯೋಜನವಿಲ್ಲ.

( ಸ-ಗಾ-ರ ॥ )—

**ಕಾಂಚೀದಾಮಲಸತ್ತನುಶ್ಚ ತನುಜಾ ಸಾಽಭೂದುಷಾ ಚ ಸ್ನುಷಾ**
**ಕೃಷ್ಣಸ್ಯೇತಿ ಸುಕೀರ್ತಿಶೌರ್ಯಶರಧಿರ್ಬಾಣಾಸುರೋ ವೀರ್ಯವಾನ್ |**
**ಛಿತ್ವಾ ಬಾಹುಪರಮ್ಪರಾಮಪಿ ಹರಿಸ್ತಸ್ಯಾಸ್ತ್ಯಸೌ ಯೋಗಭಾಜ್**
**ನಿದ್ರಾವಾನಿವ ಶೇಷತಲ್ಪ ಇಹ ಮೇ ಕಾಯೋ ವೃಥಾಽಸ್ಯಾಪ್ರಿಯಃ ॥**

ತಾ॥ ವಸ್ತ್ರಾಲಂಕಾರಾದಿಪೂರ್ಣೆಯಾದ ಉಷೆಗೆ ತಂದೆಯೆಂದು ಪ್ರಸಿದ್ಧನಾದ ಬಾಣಾಸುರನ ಭುಜಗಳಂ ಕತ್ತರಿಸಿದವನಾಗಿಯೂ, ಶೇಷಶಾಯಿಯಾಗಿ ಜಗದ್ರಕ್ಷಣಚಿನ್ತೆಯಿಂದ ಯೋಗನಿದ್ರೆಯಂ ಮಾಡುವವನಾಗಿಯೂ ಇರುವ ಸ್ವಾಮಿಗೆ ಅನಭಿಮತವಾದ ನನ್ನ ಶರೀರದಿಂದ ನನಗೇನು ಪ್ರಯೋಜನ ? (ಎಂದು ಶ್ರೀಶಠಾರಿಯೆಂಬ ನಾಯಕಿಯು ಹೇಳುತ್ತಾಳೆ.)

(೧೦) ಉಡಮ್ಬಿನಾಲ್ ಕುಱೈವಿಲ್ಲಾ ವುಯಿರ್ ಪಿರಿನ್ದ
ಮೆಲ್ಲಿತ್ತುಣ್ಣಾಮ್,
ಕಿಡನ್ದನಪೋಲ್ ತುಣಿಪಲವಾ ಅಶುರರ್‌ಕುೞಾಮ್
ತುಣಿತ್ತುಕನ್ದ,
ತಡಮ್‌ಪುನಲ ಶಡೈಮುಡಿಯಾನ್ ತನಿಯೊರು
ಕೂಱಮರ್‌ನ್ದುಱೈಯುಮ್,
ಉಡಮ್ಬುಡೈಯಾನ್ ಕವರಾದ ವುಯಿರಿನಾಲ್
ಕುಱೈವಿಲಮೇ.

ಪ್ರ॥ ಉಡಮ್ಬಿನಾಲ್ ಕುತ್ತೈವಿಲ್ಲಾ – ಶರೀರಪೋಷಣದಿಂದ ಮಹಾಕಾಯರಾದ, ಅಶುರರ್‌ಕುೞಾಮ್-ರಾಕ್ಷಸರ ಸಂಘಗಳನ್ನು, ಉಯಿರ್ ಪಿರಿನ್ದ-(ಇನ್ದ್ರನಿಂದ ಭಿನ್ನಪಕ್ಷರಾಗಿ) ನಿಷ್ಪ್ರಾಣರಾದ, ಮಲೈತ್ತುಣ್ಡಮ್ – ಪರ್ವತಖಂಡಗಳು, ಕಿಡನ್ದನಪೋಲ್–ಬಿದ್ದಿರುವಂತೆ, ಪಲತುಣಿಯಾ–ಅನೇಕಖಂಡಗಳಾಗಿ, ತುಣಿತ್ತು ಉಕನ್ದ – ಕತ್ತರಿಸಿ (ಲೋಕವೆಲ್ಲಾ ನಿಷ್ಕಂಟಕವಾಯಿತೆಂದು) ಸನ್ತುಷ್ಟನಾದ, ತಡಮ್‌ಪುನಲ – ಅತಿ ವಿಸ್ತೀರ್ಣಪ್ರವಾಹವುಳ್ಳ ಗಂಗೆಯನ್ನು ಧರಿಸಿರುವ, ಶಡೈಮುಡಿಯರ್–ಜಟಾಮುಕುಟಧಾರಿಯಾದ ರುದ್ರನು, ತನಿ ಅಮರ್‌ನ್ದು–ತನಗೆ ಆಶ್ರಯವೆಂದು ಹೊಂದಿ, ಒರುಕೂಱು–ಒಂದು ಭಾಗದಲ್ಲಿ, ಉಱೈಯುಮ್ – ನಿತ್ಯವಾಸಮಾಡುವ, ಉಡಮ್ಬು ಉಡೈಯಾರ್–ದಿವ್ಯಶರೀರವುಳ್ಳ ಸ್ವಾಮಿಯು, ಕವರಾದ–ಅಪೇಕ್ಷಿಸದೆ ಇರುವ, ಉಯಿರಿನಾಲ್–(ನಮ್ಮ)ಆತ್ಮವಸ್ತುವಿನಿಂದ, ಕುತ್ತೈವಿಲಮ್–ನಮಗೆ ಯಾವಪ್ರಯೋಜನವೂ ಇಲ್ಲ.

( ಸ–ಗಾ–ರ ॥ )—

ನಿತ್ಯಂ ಯೇ ತು ಶರೀರಪೋಷಣಪರಾಸ್ತಾಂಶ್ಚಾಸುರಾನ್ ಖಣ್ಡಯನ್
ಭಿತ್ವಾ ಪರ್ವತಸನ್ನಿಭಾನಪಿ ಹರಿರ್ಹೃಷ್ಟೋಽಭವನ್ಮಾಧವಃ ।
ತಂ ಪಾರ್ಶ್ವೇ ಶ್ರಿತವಾನ್ ಹರಶ್ಚ ಜಟಯಾ ಗಙ್ಗಾಧರೋ ಭಕ್ತಿತ-
ಸ್ತಸ್ಯಾಯಂ ಯದಿ ನ ಪ್ರಿಯೋಽಸ್ತಿ ತು ಹರೇರಾತ್ಮಾಽಪಿ ಮೇ
ಸ್ಯಾದ್ವೃಥಾ ॥

ತಾ॥ ನಿತ್ಯವೂ ಶರೀರಪೋಷಣಪರರಾಗಿ ಮಹಾಕಾಯರಾದ ಅಸುರರ ಸಂಘಗಳನ್ನೆಲ್ಲಾ ಪರ್ವತಖಂಡಗಳಂತೆ ಕತ್ತರಿಸಿಹಾಕಿ, ಲೋಕವೆಲ್ಲಾ ನಿಷ್ಕಂಟಕವಾಯಿತೆಂದು ಸನ್ತುಷ್ಟನಾದವನಾಗಿಯೂ, ಗಂಗಾಧರನಾದ ರುದ್ರನೂ ಒಂದು ಪಾರ್ಶ್ವದಲ್ಲಿ ತನ್ನ ಭಾಗವೆಂದು ಆಶ್ರಯಿಸಿ ವಾಸಮಾಡುವಂತಹ ದಿವ್ಯಶರೀರವುಳ್ಳವನಾಗಿಯೂ ಇರುವ ಶ್ರೀಮನ್ನಾರಾಯಣರೂಪಿಯಾದ ಸ್ವಾಮಿಗೆ ಅನಭಿಮತವಾದ ಆತ್ಮವಸ್ತುವಿನಿಂದ ನಮಗೇನುಪ್ರಯೋಜನ ?

(೧೧) ಉಯಿರಿನಾಲ್ ಕುತ್ತೈವಿಲಮ್ ಪುಲಕೇೞ್ ತನ್ನುಳ್ಳ್ಳುಡುಕ್ಕಿ,
ತಯಿರ್ ವೆಣ್ಣೈಯುಣ್ಡಾನೈ ತ್ತಡಮ್‌ಕುರುಕೂರ್
ಚ್ಚಡಕೋಪನ್,
ಶೆಯಿರಿಲ್ ಶೊಲ್ಲಿಶೈಮಾಲೈ ಯಾಯಿರತ್ತುಳಿಪ್ಪತ್ತಾಲ್,
ವಯಿರಮ್ ಶೇರ್‌ಪಿಱಪ್ಪಱುತ್ತು ವೈಕುನ್ದಮ್ ನಣ್ಣುವರೇ.

ಪ್ರ|| ಉಯಿರಿನಾಲ್ - ಜೀವಾತ್ಮವರ್ಗಗಳಿಂದ, ಕುತ್ತೈವಿಲ್ಲಾ-ಪರಿಪೂರ್ಣವಾದ, ಏೞುಲಕು-ಸಮಸ್ತ (ಏಳು) ಲೋಕಗಳನ್ನೂ, ತನ್ನುಳ್ ಒಡುಙ್ಗ-ತನ್ನಲ್ಲೇ ಸಂಕಲ್ಪದಿಂದ ಇಟ್ಟು ರಕ್ಷಿಸುವವನಾಗಿ, ತಯಿರ್‌ವೆಣ್ಣೆಯ್-ಮೊಸರನ್ನೂ ಬೆಣ್ಣೆಯನ್ನೂ, ಉಣ್ಡಾನೈ-ಭಕ್ಷಿಸಿದ ಸರ್ವಸುಲಭನಾದ ಸ್ವಾಮಿಯನ್ನು ಕುರಿತು, ತಡಮ್‌ಕುರುಕೂರ್-ವಿಶಾಲವಾದ ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪರ್ ನಮ್ಮಾೞ್ವಾರ್, ಶೆಯಿರ್ ಇಲ್-(ಶಬ್ದಾರ್ಥಗಳಲ್ಲಿ) ದೋಷಗನ್ಧವಿಲ್ಲದ, ಶೊಲ್-ದಿವ್ಯಸೂಕ್ತಿಯಾದ, ಇಶೈಮಾಲೈ - ಗಾನಮಾಲಾರೂಪವಾದ, ಆಯಿರತ್ತುಳ್-ಸಹಸ್ರಪದ್ಯಮಾಲೆಯೊಳು, ಇಪ್ಪತ್ತಾಲ್-ಈ ದಶಕದಿಂದ, ವಯಿರಮ್‌ಶೇರ್-ವಜ್ರದಂತೆ ಗಟ್ಟಿಯಾಗಿ ಅನಾದಿಸಿದ್ಧವಾದ, ಪಿಱಪ್ಪು-ಜನ್ಮವನ್ನು (ಸಂಸಾರ ಬನ್ಧವನ್ನು), ಅಱುತ್ತು-ಭೇದಿಸಿ, ವೈಕುನ್ದಮ್-ಪರಮಪದವನ್ನು, ನಣ್ಣುವರೇ-ಹೊಂದುವರಷ್ಟೆ.

( ಸ-ಗಾ-ರ || )—

ಆತ್ಮಾನಸ್ಸಕಲಾಶ್ಚ ಯಸ್ಯ ವಪುಷಿ ಶ್ರೀಶಸ್ಯ ಸನ್ಧಾರಿತಾ-
ಸ್ತಂ ಕೃಷ್ಣಂ ನವನೀತದುಗ್ಧದಧಿಭುಕ್ತ್ಯಾಸಕ್ತಚಿತ್ತಂ ಹರಿಮ್ |
ಸ್ತೋತುಂ ಶ್ರೀಕುರುಕೇಶ್ವರಶ್ಶಠರಿಪುರ್ದಿವ್ಯಂ ಸಹಸ್ರಂ ಜಗೌ
ತತ್ರೇದಂ ದಶಕಂ ಪಠನ್ತಿ ಯದಿ ತೇ ಧಾಮ ಪ್ರಯಾನ್ತ್ಯವ್ಯಯಮ್ ||

ತಾ || ಜೀವಾತ್ಮವರ್ಗಗಳಿಂದ ಕೂಡಿದ ಸಮಸ್ತ ಲೋಕಗಳನ್ನೂ ತನ್ನ ಉದರದಲ್ಲಿಟ್ಟು ರಕ್ಷಿಸುವ ದಧಿನವನೀತಭಕ್ಷಕನಾದ ಸ್ವಾಮಿಯನ್ನು ಸ್ತೋತ್ರಮಾಡುವುದಕ್ಕಾಗಿ ಶ್ರೀ ಶಠಾರಿಮುನಿವರ್ಯರು (ದೋಷರಹಿತವಾಗಿ) ರಚಿಸಿದ ಗಾನಮಾಲಾರೂಪವಾದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಪಠನಮಾಡುವವರು ಅನಾದಿಸಿದ್ಧವಾದ (ದೃಢಪ್ರತಿಷ್ಠಿತವಾದ) ಸಂಸಾರಬನ್ಧವನ್ನೂ ಭೇದಿಸಿ ಪರಮ ಪದವನ್ನು ಹೊಂದುವರು.

( ದ್ರು-ಉ-ಸಂ || )—

ಏವಂ ರುದನ್ನಪಿ ಶಠಾರಿರಲಬ್ಧಕಾಮ-
ಸ್ಸ್ವೋಪೇಕ್ಷಣೈಕಪರತಾಮವಧಾರ್ಯ ಶೌರೇಃ |
ತಚ್ಛೇಷಶಾದಿರಹಿತೇ ಸಕಲೇ ಸ್ವಕೀಯೇ
ಸ್ವಸ್ಮಿನ್ನಪಿ ಸ್ಫುರಿತನಿಸ್ಪೃಹತೋಽಷ್ಟಮೇಽಭೂತ್ ||

( ದ್ರ ಉ-ತಾ-ರ || )—

ಸೌನ್ದರ್ಯಾದೌ ಸ್ವಕೀಯೇ ಹೃದಿ ಚ ಖನಿಕರೇ ಪೂರ್ಣತಾಯಾಂ ಚ ಕಾನ್ತ್ಯಾ
ಸಮ್ಯಜ್ಞಾನೇ ಪ್ರಕಾಶೇ ವಲಯರಶನಯೋರ್ವರ್ಷ್ಮಣಿ ಸ್ವಸ್ವರೂಪೇ |
ಸ್ಯಾದ್ವಿಷ್ಣೋರ್ಯದ್ಯುಪೇಕ್ಷಾ ತದಿದಮಖಿಲಮುನ್ಮೂಲನೀಯಂ ತದೀಯೈ-
ರಿತ್ಯೂಚೇ ಕಾರಿಸೂನುಸ್ತದುಪರಿ ಕಥಯಂಸ್ತಾಂ ಶಿವಾದ್ಯಾಶ್ರಿತಾಜ್ಞಾಮ್ ||

(ಈ ಅಷ್ಟಮದಶಕದ ಸಾರಾಂಶ)—

ಈ ಎಂಟನೆಯದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ತಮ್ಮ ಮನೋರಥ ಸಿದ್ಧಿಯಾಗಲಿಲ್ಲವೆಂದು ಖಿನ್ನರಾದುದರಿಂದ, ಭಗವನ್ತನು ತನ್ನಲ್ಲಿ ಅನಾದರವಂ ಮಾಡಿದಾನೆಂದು ಈ ನಾಯಕಿಯು ತಿಳಿದು ಕೊಂಡು, ಅವನಿಗೆ ಅಭಿಮತವಲ್ಲದ ತನ್ನ ಸೌನ್ದರ್ಯ-ಮನಸ್ಸು-ಸ್ತ್ರೀತ್ವಪೂರ್ತಿ-ಲಾವಣ್ಯ-ಜ್ಞಾನ-ಪ್ರಕಾಶ-ಕೈಬಳೆ-ಒಡ್ಯಾಣ-ಶರೀರ - ಆತ್ಮಾ—ಇವುಗಳೆಲ್ಲವೂ ನಿರರ್ಥಕಗಳೆಂದು ಹೇಳಿ, ಹೀಗೆ ತನ್ನ ಆತ್ಮಾತ್ಮೀಯ ಸಮಸ್ತವಸ್ತುಗಳೂ ತ್ಯಾಜ್ಯ ಗಳೆಂದು ನಿಷ್ಕರ್ಷವನ್ನು ಮಾಡಿದಾಳೆಂದು—ಹೇಳಲ್ಪಟ್ಟಿದೆ.

ಶ್ರೀಃ

# ಚತುರ್ಥಶತಕದಲ್ಲಿ—ನವಮದಶಕ.

(ನಣ್ಣಾದಾರ್ ಮುಱುವಲಿಪ್ಪ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವದ್ವಿಮುಖರಾದ ನಾಸ್ತಿಕರನ್ನು ನೋಡಲಾರದೆ ಸನ್ತಪ್ತರಾಗಿ ತಮ್ಮ ದೇಹತ್ಯಾಗವನ್ನು ಮಾಡಬೇಕೆಂದು ನಿಶ್ಚಯಿಸಿ ಭಗವನ್ತನನ್ನು ತಮ್ಮ ಸ್ವೀಕಾರಕ್ಕಾಗಿ ಪ್ರಾರ್ಥಿಸುತ್ತಾರೆ.)

---

(೧) ನಣ್ಣಾದಾರ್ ಮುಱುವಲಿಪ್ಪ ನಲ್ಲುಱ್ಱಾರ್ ಕರೈನ್ದೇಙ್ಗ,
ಎಣ್ಣಾರಾ ತ್ತುಯರ್ ವಿಳೈಕ್ಕುಮಿವ್ವೈಯಮ್ಮ
ವುಲಕಿಯಱ್ಕೈ,
ಕಣ್ಣಾಳಾ ಕಡಲ್ಕಡೈನ್ದಾಯುನಕ್ಕೞಲ್ಕ್ಕೇ
ವರುಮಾಱ್ ಪರಿಶು,
ತಣ್ಣಾವಾದಡಿಯೇನೈ ಪ್ಪಣಿಕಣ್ಡಾಯ್ ಶಾಮಾಱೇ,

ಪ್ರ || ನಣ್ಣಾದಾರ್ – (ಶತ್ರುತ್ವದಿಂದ) ಅನುಕೂಲವೃತ್ತಿಯಿಲ್ಲದವರು, ಮ್ಮುೞವಲಿಪ್ಪ–(ಇವನ ಅನರ್ಥಕ್ಲೇಶಗಳನ್ನು ನೋಡಿ) ಸನ್ತುಷ್ಟರಾಗಿ ನಗುವವ ರಾಗುವಂತೆಯೂ, ನಲ್ಲುಱ್ಱಾರ್–ಸ್ನೇಹದಿಂದ ಸಹೃದಯರಾದ ಬನ್ಧುಗಳು, ಕರೈನ್ದು ಏಙ್ಗ–(ಇವನಿಗೆ ಯಾವ ಅಪಾಯವುಂಟಾಗುವುದೋ ಎಂದು) ಕ್ಲೇಶ ಪಟ್ಟು ಅಳುವಂತೆಯೂ, ಎಣ್ ಆರಾ–ಗಣನೆಮಾಡಲಾಗದ (ಅಸಂಖ್ಯಾತವಾದ), ತುಯರ್ – ದುಃಖಗಳನ್ನು, ವಿಳೈಕ್ಕುಮ್ – ಬೆಳೆಸಿಕೊಂಡು ಹೋಗುವ, ಇವ್ವೈ ಉಲಕಿಯಱ್ಕೈ–ಈ ಲೋಕಯಾತ್ರೆಗಳು, ಎನ್ನ–ಏನಾಗಿವೆಯೋ ? (ವಾಚಾ ವರ್ಣಿ ಸಲಶಕ್ಯವಾಗಿವೆಯಲ್ಲವೆ ? ) ಕಣ್ಣಾಳಾ – (ನಿರುಪಾಧಿಕಬನ್ಧುವಾದ) ಕರುಣಾ ನಿಧಿಯೇ !, ಕಡಲ್‌ಕಡೈನ್ದಾಯ್–ಸಮುದ್ರಮಥನ ಮಾಡಿದವನೇ !, ಉನಕ್ಕೞ ಲ್ಕ್ಕೇ–ನಿನ್ನ ಪಾದಗಳಿಗೆ ವಶ್ಯನಾಗಿ, ವರುಮ್‌ಪರಿಶು–ನಾನು ಬರುವಂತೆ, ತಣ್ಣಾ ವಾದು–ವಿಳಂಬಮಾಡದೆ, ಅಡಿಯೇನೈ–(ನಿನಗೇ ದಾಸನಾದ) ನನ್ನನ್ನು ಕುರಿತು, ಶಾಮಾಱು–(ಶ [illegible] ರೀರವಿಯೋಗವಾಗುವಂತೆ, ಪಣಿಕಣ್ಡಾಯ್–("ಮೋಕ್ಷ ಯಿಷ್ಯಾಮಿ"—ಎ[illegible]ಂತೆ) ಒಂದು ಮಾತನ್ನು ದಯವಿಟ್ಟು ನೀನು ಹೇಳು .

( ಸ–ಗಾ–ರ || )—

ಪ್ರತ್ಯರ್ಥಿಸ್ಮಿತಪೂರ್ವಕಾಶ್ಚ ವಿವಿಧಾಃ ಕ್ಲೇಶಾ ಅಮೀ ಭೂತಲೇ
ಸ್ನಿಗ್ಧಾನಾಂ ಬಹುದುಃಖಹೇತವ ಇತಿ ಜ್ಞಾತ್ವಾ ವಯಂ ತ್ವಾಂ ಶ್ರಿತಾಃ|
ಕಾರುಣ್ಯಾಮ್ಬುನಿಧೇ ! ಸಮುದ್ರಮಥನ ! ತ್ವತ್ಪಾದಪದ್ಮದ್ವಯೀ
ಮಾಮದ್ಯೈವ ನಿಯೋಜ್ಯ ಮೇ ಕುರು ತನೋರ್ವಿಶ್ಲೇಷಮಾತ್ಯನ್ತಿಕಮ್||

ತಾ|| ಲೋಕದಲ್ಲಿ ಚೇತನರಿಗೆ ಸಂಕಟವು ಬಂದಾಗ ಶತ್ರುಗಳು ಸಂತುಷ್ಟ ರಾಗಿ ನಗುತ್ತಾರೆ. ಬನ್ಧುಗಳು ಸನ್ತಪ್ತರಾಗಿ ದುಃಖಿಸುತ್ತಾರೆ. ಹೀಗೆಯೇ ಲೋಕ ಯಾತ್ರೆಯು ನಡೆಯುತ್ತಿದೆ. ಇದು ವರ್ಣಿಸಲಶಕ್ಯವಾದುದು. ಆದುದರಿಂದ (ನಿರುಪಾಧಿಕ ಬನ್ಧುವಾಗಿ) ಕರುಣಾನಿಧಿಯಾಗಿಯೂ, (ಸಮುದ್ರಮಥನಮಾಡಿ) ಮಹೋಪಕಾರಕನಾಗಿಯೂ ಇರುವ ನಿನ್ನ ಪಾದಗಳನ್ನೇ ನಾನು ಹೊಂದುವಂತೆ, ನೀನು ನನಗೆ ಶೀಘ್ರವಾಗಿ ಈ ಪ್ರಾಕೃತ ಶರೀರವಿಯೋಗವಂಮಾಡಿಸಿ (ಮೋಕ್ಷವಂ ಕೊಡುತ್ತೇನೆಂದು) ಅಭಯವಚನವನ್ನು ಕೃಪೆಮಾಡಿ ಹೇಳು.

(೨) ಶಾಮಾಱುಮ್ ಕೇಡುಮಾಱುಮ್ ತಮರುಮ್ಱ್ಱಾರ್
ತಲೈತ್ತಲೈಪ್ಪೆಯ್ದು,
ಏಮಾಱಿ ಕ್ಕಿಡನ್ದಲಱ್ಱು ಮಿಮ್ಮೈಯೆನ್ನು ವುಲಕಿಯಱ್ಕೈ,
ಆಮಾಱೊನ್ಱಱಿಯೇನಾನರವಣೈಯಾಯಮ್ಮಾನೇ,
ಕೂಮಾಱೆ ವಿರೈಕಣ್ಡಾಯಡಿಯೇನೈ ಕ್ಕುಱಿಕೊಣ್ಡೇ.

ಪ್ರ॥ ಶಾವೂಮ್ - (ಹಠಾತ್ತಾಗಿ) ಮರಣಹೊಂದುವ ಪ್ರಕಾರವೂ, ಕೆಡುಮೂಮ್-(ಐಶ್ವರ್ಯಾದಿ ಸಮ್ಪತ್ತು) ನಷ್ಟವಾಗುವ ಪ್ರಕಾರವೂ, ತಮರ್-ಜ್ಞಾತಿಗಳೂ (ಸಮೀಪ ಬನ್ಧುಗಳೂ), ಉಱ್ಱಾರ್ - ಸಮ್ಬನ್ಧಿಗಳೂ, (ಬನ್ಧು ಮರಣಾವಸ್ಥೆಯಲ್ಲಿ) ತಲೈತ್ತಲೈಪ್ಪೆಯ್ದು-(ತಲೆ ತಲೆ ಹೊಡೆದುಕೊಂಡು) ಒಬ್ಬರ ಮೇಲೆ ಒಬ್ಬರುಬಿದ್ದು, ಏಮಾತ್ತಿ-ಪ್ರಲಾಪಾದಿಗಳಂಮಾಡಿ, ಕಿಡನ್ದು-ಹೊರಳಾಡುತ್ತ, ಅಲಱ್ಱುಮ್-ಮೊರೆಯಿಡುವ ಘೋಷವೂ, ಇವೈ-ಇವುಗಳೆಲ್ಲಾ, ಎನ್ನ ಉಲಕಿಯಱ್ಕೈ-ಎಂತಹ ಲೋಕಯಾತ್ರಾಪ್ರಕಾರಗಳು ? ನಾ-ನಾನು, ಆಮ್ ಆಱು-ಇದೆಲ್ಲಾ ಹೀಗೆ ಮುಗಿಯುವುದೆಂಬ ರೀತಿಯನ್ನು, ಒನ್ಱು ಅಱಿಯೇ-ಯಾವುದನ್ನೂ ತಿಳಿಯಲಾರೆನು. ಅರವಣೈಯಾಯ್-ಶೇಷಭೂತನಾದ ಅನನ್ತನ ಮೇಲೆ ಶಯನಮಾಡಿರುವ, ಆಮ್ಮಾನೇ-ಸ್ವಾಮಿಯೇ !, ಅಡಿಯೇನೈ-ದಾಸಭೂತನಾದ ನನ್ನನ್ನು, ಕುತ್ತಿಕ್ಕೊಣ್ಡು - (ದುಃಖಸಹನಲ್ಲವೆಂದು) ನೆನಪಿನಲ್ಲಿಟ್ಟು, ಕೂವಾಱು-ಕೂಗಿ ಕರೆದುಕೊಳ್ಳುವಂತೆ, ನಿರೈಕಣ್ಡಾಯ್-ತ್ವರೆಮಾಡು.

( ಸ-ಗಾ-ರ ॥ )—

ಮೃತ್ಯುಶ್ಚಾಪಿ ಹಠಾದ್ಭವೇದಿಹ ಧನಧ್ವಂಸೋಽಪಿ ಚ ಜ್ಞಾತಯೋ
ಬನ್ಧೂನಾಂ ನಿವಹಾಸ್ತಲಾತಲಿ ಪತನ್ತ್ಯೇವ ಪ್ರಲಾಪಾಕುಲಾಃ ।
ಹಾ! ಹಾ! ಹನ್ತ! ಜಗತ್ಕ್ರಿಯೇದೃಶಮಹೋ! ಕಿಂ ಸ್ಯಾನ್ನ ವೇದ್ಮಿ ಸ್ವಯಂ
ಮಾಂ ಶೇಷಂ ತವ ಶೇಷನಾಥ! ಕಥಮಪ್ಯಾಹೂಯ ಧನ್ಯಂ ಕುರು ॥

ತಾ॥ ಈ ಲೋಕಯಾತ್ರೆಯು ಅತಿದುಸ್ಸಹವಾಗಿದೆ. ಹಠಾತ್ತಾಗಿ ಮರಣವೂ, ಐಶ್ವರ್ಯಾದಿ ಸಮ್ಪದ್ವಿನಾಶವೂ, ಜ್ಞಾತಿಬನ್ಧುವರ್ಗಗಳ ಮಹಾಪ್ರಲಾಪಗಳೂ ಸಮ್ಭವಿಸುತ್ತ ವರ್ಣಿಸಲಶಕ್ಯವಾಗಿವೆ. ಈ ಲೋಕಯಾತ್ರಾಪ್ರಕಾರವು ಹೇಗೆ ಸಮಾಪ್ತವಾಗುವುದೋ ನಾನು ಒಂದನ್ನೂ ಅರಿಯೆನು. ಆದುದರಿಂದ ಶೇಷಶಾಯಿಯಾದ ಸ್ವಾಮಿಯೇ ! ನೀನು ದಾಸಭೂತನಾದ ನನ್ನನ್ನು ನೆನಪಿನಲ್ಲಿಟ್ಟು ಶೀಘ್ರವಾಗಿ ಕರೆದುಕೊಂಡು ನಿನ್ನ ಪಾದಾರವಿನ್ದಗಳಲ್ಲಿ ಸೇರಿಸಿಕೊಳ್ಳಬೇಕು.

(೩) ಕೊಣ್ಡಾಟ್ಟುಮ್ ಕುಲಮುಂ ಪುನೈವುಮ್
ತಮರುಱ್ಱಾರ್ ವಿ಴ುನಿದಿಯುಮ್,
ವಣ್ಡಾರ್ ಪೂಙ್ಕು಴ಲಾಳುಮ್
ಮನೈಯೊೞಿಯವುಯಿರ್ಮಾಯ್ದಲ್,
ಕಣ್ಡಱ್ರೇನುಲಕಿಯಱ್ಕೈ ಕಡಲ್ವಣ್ಣಾ ವಡಿಯೇನೈ,
ಪೆಣ್ಡೇಪೋಲ್ ಕರುದಾದುನ್ನಡಿಕ್ಕೇ ಕೂಯ್ ಪಣಿಕೊಳ್ಳೇ

ಪ್ರ || ಕೊಣ್ಡಾಟ್ಟುಮ್ - (ಧನಿಕರನ್ನು ಆಶ್ರಯಿಸಿ ಜನರು ಮಾಡುವ) ಸ್ತೋತ್ರವೂ, ಕುಲಮ್ ಪುನ್ಮೈಯುಮ್- (ಕುಲೋತ್ಕರ್ಷನನ್ನು ನಟಿಸುವವರ) ಅಭಿಜಾತ್ಯವೂ, ತಮರ್-(ಐಶ್ವರ್ಯಕ್ಕಾಗಿ ಬಂದುಸೇರುವ) ಜ್ಞಾತಿಗಳೂ, ಉಱ್ಱಾರ್- ಸಮ್ಬನ್ಧಿಗಳೂ, ವಿೞುನಿದಿಯುಮ್-ಮಹಾ ನಿಧಿನಿಕ್ಷೇಪವೂ, ವಣ್ಡು ಆರ್ ಪೂಮ್ ಕುೞಲಾಳುಮ್-ಭ್ರಮರಗಳಿಂದ ತುಂಬಿದ (ಅತ್ಯನ್ತ ಪರಿಮಳಭರಿತವಾದ) ಪುಷ್ಪಗಳಿಂದ ಅಲಂಕೃತವಾದ ಕೇಶಪಾಶವುಳ್ಳ (ಭೋಗ್ಯೆಯಾದ) ಸ್ತ್ರೀಯೂ, ಮನೈ-ಮಹಾಪ್ರಾಸಾದವೂ (ಉಪ್ಪರಿಗೆಯ ಮನೆಯೂ), ಒೞಿಯ-ನಾಶಹೊಂದುವಂತೆ (ತನ್ನನ್ನು ಕೈಬಿಡುವಂತೆ), ಉಯಿರ್ಮಾಯ್ದಲ್-(ಹಠಾತ್ತಾಗಿ) ಪ್ರಾಣವಿನಾಶವಾಗೋಣವೆಂಬ, ಉಲಕಿಯಱ್ಕೈ-ಈ ಲೋಕಯಾತ್ರಾಸ್ವಭಾವವನ್ನು, ಕಣ್ಡು-ಕಂಡು, ಆಱ್ಱೇ‌ನ್-(ನಾನು) ಸಹಿಸಲಾರೆನು. ಕಡಲ್ವಣ್ಣಾ-ಸಮುದ್ರವರ್ಣನಾದ ಗಂಭೀರ ಸ್ವಭಾವನೇ (ಸೌನ್ದರ್ಯನಿಧಿಯೇ!), ಅಡಿಯೇನೈ-ದಾಸನಾದ ನನ್ನನ್ನು, ಪಣ್ಡೇಪೋಲ್-ಪೂರ್ವದಂತೆ, ಕರುದಾದು-ನೆನೆಯದೆ, ಉನ್ ಅಡಿಕ್ಕೇ-ನಿನ್ನ ಪಾದಗಳಿಗೇ, ಕೂವಿ-ಕೂಗಿ, ಪಣಿಕೊಳ್-ಕೈಂಕರ್ಯದಲ್ಲಿ ನಿಯಮಿಸಬೇಕು.

( ಸ-ಗಾ-ರ || )—

ಪ್ರಾಶಸ್ತ್ಯಂ ಚ ಕುಲೀನತಾಮಪಿ ಭುವಿ ಜ್ಞಾತ್ಯಾದಿಬನ್ಧೂನಪಿ
ಶ್ರೀಸೌಭಾಗ್ಯಮಪಿ ಸ್ತ್ರಿಯಂ ಚ ತರುಣೀಂ ಪ್ರಾಸಾದಮಪ್ಯುನ್ನತಮ್ |
ತ್ಯಕ್ತ್ವಂ ಯೇ ವಿಲಪನ್ತಿ ಮೃತ್ಯುಸಮಯೇ ದೃಷ್ಟ್ವಾ ನ ಚೈತಾನ್ ಸಹೇ!
ಸೌನ್ದರ್ಯಾಮ್ಬುನಿಧೇ ! ನ ಮಾಂ ತ್ಯಜ ಪುರೇವಾಹೂಯ ದಾಸ್ಯೇ ಕುರು||

ತಾ|| ಜನರ ಸ್ತೋತ್ರವಚನವೂ, ತನ್ನ ಸತ್ಕುಲಾನ್ವಯವೂ, ಜ್ಞಾತ್ಯಾದಿ ಬನ್ಧುವರ್ಗಗಳೂ, ಮಹಾನಿಧಿರೂಪವಾದ ಸಮ್ಪತ್ತೂ, ಭೋಗ್ಯೆಯಾದ ಸ್ತ್ರೀಯೂ, ಮಹಾಭವನವೂ— ಇವುಗಳೆಲ್ಲಾ ತನ್ನನ್ನು ಕೈಬಿಡುವಂತೆ ತಾನು ಹಠಾತ್ತಾಗಿ ಮರಣವಂ ಹೊಂದುವ ಈ ಲೋಕದ ಸ್ವಭಾವವನ್ನು ಕಂಡು ನಾನು ಸಹಿಸಲಾರೆನು. ಸಮುದ್ರದಂತೆ ಗಂಭೀರಸ್ವಭಾವನಾದ ಸೌನ್ದರ್ಯನಿಧಿಯೇ! ನಾನು ಪೂರ್ವದಂತೆ ಇದೇನೆಂದು ನನ್ನನ್ನು ಕೈಬಿಡದೆ, ಈಗಲೇ ಕರೆದುಕೊಂಡು ನಿನ್ನ ಪಾದಾರವಿನ್ದಗಳಲ್ಲಿಯೇ ನಿತ್ಯಕೈಂಕರ್ಯವಂ ಮಾಡುವಂತೆ ನಿಯಮಿಸು.

(೪) ಕೊಳ್ಳೆನ್ಱು ಕಿಳರ್ನ್ದೆೞುನ್ದ ಪೆರುಮ್ ಶೆಲ್ವಮ್ ನೆರುಪ್ಪಾಕ,
ಕೊಳ್ಳೆನ್ಱು ತಮಮೂಡುಮ್ ಇವೈಯೆನ್ನ ವುಲಕಿಯಱ್ಕೈ,
ವಳ್ಳಲೇ ಮಣಿವಣ್ಣಾ ವುನಕೞಲ್ಕ್ಕೇ ವರುಮ್ ಪರಿಶು,
ವಳ್ಳಲ್ ಶೆಯ್ದಡಿಯೇನೈ ಯುನದರುಳಾಲ್ ವಾಙ್ಗಾಯೇ.

ಪ್ರ|| ಕೊಳ್ ಎನ್ರು–"ನನ್ನನ್ನು ಸೀಕರಿಸು, ನನ್ನನ್ನು ಸ್ವೀಕರಿಸು" ಎಂದು, ಕಿಳರ್‌ನ್ದು ಎೞುನ್ದ – ಮೇಲೆ ಮೇಲೆ ಬಿದ್ದುಬರುತ್ತಿರುವ, ಪೆರುಮ್‌ಶೆಲ್ವಮ್–ಮಹಾಸಮ್ಪತ್ತೂ, ನೆರುಪ್ಪಾಕ–ಅಗ್ನಿಕಲ್ಪವೆಂದು (ಬೆಂಕಿಯಂತೆ ಅನರ್ಥಕರವೆಂದು) ತಿಳಿದೂ, ಕೊಳ್ ಎನ್ರು–"ಅದನ್ನೇ ಸ್ವೀಕರಿಸು" ಎಂದು, ತಮುಮ್ ಮೂಡುಮ್–ಅಜ್ಞಾನರೂಪವಾದ ತಮಸ್ಸು ಆವರಿಸುವಂತೆ ಇರುವ, ಇವೈ–ಇವುಗಳೆಲ್ಲಾ, ಎನ್ನ ಉಲಕಿಯಲ್ಬೆ–ಎಂತಹ ಲೋಕಸ್ವಭಾವಗಳು ? ವಳ್ಳಲೇ–ಔದಾರ್ಯನಿಧಿಯೇ !, ಮಣಿವಣ್ಣಾ–ನೀಲಮಣಿವರ್ಣನೇ !, ಉನಕ್ಕುತ್ತೆ–ನಿನ್ನ ಪಾದಗಳಿಗೇ, ವರುಮ್ ಪರಿಶು–(ನಾನು) ಬಂದು ಸೇರುವಂತೆ, ವಳ್ಳಲ್‌ಶೆಯ್ದು – ನಿನ್ನ ವಿಶೇಷೌದಾರ್ಯವಂ ನನ್ನಲ್ಲಿ ತೋರಿಸಿ, ಅಡಿಯೇನೈ–ದಾಸನಾದ ನನ್ನನ್ನು, ಉನದು ಅರುಳಾಲ್–ನಿನ್ನ ಕೃಪೆಯಿಂದ, ವಾಙ್ಗಾಯ್–ಸ್ವೀಕರಿಸಬೇಕು.

( ಸ–ಗಾ–ರ || )—

ನಿತ್ಯಾರೂಢಸಮೃದ್ಧಿಸಮ್ಪದಮಪಿ ಸ್ವಸ್ಯಾಗ್ನಿಕಲ್ಪಾಂ ಸ್ವಯಂ
ದೃಷ್ಟ್ವಾಽಪ್ಯಸ್ತಿ ಧನಾತುರೋಽತ್ರ ತಮಸಾ ಕಿಂ
ಲೋಕಯಾತ್ರಾ ತ್ವಿಯಮ್? |
ಔದಾರ್ಯಾಮ್ಬುನಿಧೇ! ಹರೇ! ಮಣಿನಿಭಸ್ವಾಙ್ಗ! ಸ್ವಪಾದದ್ವಯೇ
ನಿತ್ಯಂ ಯೋಜಯಿತುಂ ಚ ಮಾಂ ತು ಕೃಪಯಾ ದಾಸಂ ಜನಂ
ಸ್ವೀಕುರು ||

ತಾ|| ಈ ಲೋಕದಲ್ಲಿ ಧನಿಕರಿಗೆ ಮೇಲೆಮೇಲೆ ಬಿದ್ದು ಬರುತ್ತಿರುವ (ಧನ ರಾಶಿರೂಪವಾದ) ಐಶ್ವರ್ಯವೆಲ್ಲವೂ ಅಗ್ನಿಕಲ್ಪವೆಂದು ತಿಳಿದು ಇದ್ದಾಗ್ಯೂ ಅದನ್ನೇ ಇನ್ನೂ ಆಶೆಪಟ್ಟು ಸ್ವೀಕರಿಸುವಂತೆ ಮಾಡುವ ಮೋಹಾನ್ಧಕಾರಕ್ಕೆ ವಶ್ಯವಾದ ಈಲೋಕದ ಸ್ವಭಾವವು ಎಂತಹುದು ? ಔದಾರ್ಯನಿಧಿಯಾದ ಸ್ವಾಮಿಯೇ! ನೀಲ ಮಣಿ ವರ್ಣನೇ! ನಿನ್ನಪಾದಗಳನ್ನೇ ನಾನು ಸೇರುವಂತೆ ನನ್ನಲ್ಲಿ ನಿನ್ನ ಔದಾರ್ಯಾತಿಶಯವಂ ತೋರಿಸಿ ದಾಸನಾದ ನನ್ನನ್ನು ನಿನ್ನ ನಿತ್ಯಕೈಂಕರ್ಯಕ್ಕಾಗಿ ಕೃಪೆಯಿಂದ ಸ್ವೀಕರಿಸು.

(೫) ವಾಙ್ಗುನೀರ್ ಮಲರುಲಕಿಲ್ ನಿರ್ಪನವುಮ್ ತಿರಿವನವುಮ್,
ಆಙ್ಗುಯಿರ್‌ಕಳ್ ಪಿಱಪ್ಪಿಱಪ್ಪು ಪಿಣಿಮೂಪ್ಪಾಲ್
ತಕರ್‌ಪ್ಪುಣ್ಣುಮ್,
ಈಙ್ಗಿದನ್ಮೇಲ್ ವೆನ್ನರಕಮಿವೈ ಯೆನ್ನವುಲಕಿಯಲ್ಬೆ,
ವಾಙ್ಗೆನೈ ನೀ ಮಣಿವಣ್ಣಾ ವಡಿಯೇನೈ ಮಱುಕ್ಕೇಲೇ

ಪ್ರ|| ವಾಙ್ಗು ನೀರ್-ಅಲೆಗಳಲ್ಲಿ ಸಿಕ್ಕುವ ಪದಾರ್ಥಗಳನ್ನೆಲ್ಲಾ ಒಳಗೆ ಎಳೆದು ಕೊಳ್ಳುವ ಸಮುದ್ರಜಲವುಳ್ಳ, ಮಲರುಲಕಿಲ್ - ವಿಸ್ತೀರ್ಣವಾದ ಭೂಮಿಯಲ್ಲಿ, ನಿಱ್ಪನವುಮ್-ನಿಲ್ಲೋಣವೂ, ತಿರಿವನವುಮ್-ಸಂಚರಿಸೋಣವೂ ಉಳ್ಳ, ಅಙ್ಗು -ಆಯಾ ಸ್ಥಲಗಳಲ್ಲಿರುವ, ಉಯಿರ್ಕಳ್-ಜೀವಾತ್ಮವರ್ಗಗಳು, ಈಙ್ಗು-ಇಲ್ಲಿ, ಪಿಱಪ್ಪು ಇಱಪ್ಪು ಪಿಣಿ ಮೂಪ್ಪಾಲ್ - ಜನನ ಮರಣ ವ್ಯಾಧಿ ವಾರ್ಧಕಗಳಿಂದ, ತಕರ್ಪ್ಪುಣ್ಣುಮ್-ಮರ್ದಿತವಾಗುತ್ತಿವೆ. ಇದನ್ಮೇಲ್-ಇದಕ್ಕೆಮೇಲೆ, ವೆಮ್ ನರಕಮ್-ಕ್ರೂರವಾದ ರೌರವಾದಿ ನರಕಗಳೂ ಉಂಟಾಗುವುವು. ಇವೈ ಎನ್ನ ಉಲಕಿಯಱ್ಕೈ-ಇವೆಲ್ಲಾ ಎಂತಹ ಲೋಕಯಾತ್ರಾಪ್ರಕಾರಗಳು? ಮಣಿವಣ್ಣಾ-ನೀಲಮಣಿವರ್ಣನೇ!, ನೀ-ನೀನು, ಎನ್ನೈ-ನನ್ನನ್ನು, ವಾಙ್ಗು-ಸ್ವೀಕರಿಸು. ಅಡಿ ಯೇನ್ನೈ-ದಾಸಭೂತನಾದ ನನ್ನನ್ನು, ಮಱುಕ್ಕೇಲ್ - ಮೋಹಾವಿಷ್ಟನಾಗುವಂತೆ ಮಾಡಬೇಡ (ವಂಚಿಸಬೇಡ).

( ಸ-ಗಾ-ರ || )—

ಪೃಥ್ವೀಂ ವಾರಿಧಿಸಂವೃತಾಂ ಹಿ ಮನುಜಾ ಆಶ್ರಿತ್ಯ ತಿಷ್ಠನ್ತ್ಯಮೀ
ಸರ್ವೇ ಚಾತ್ರ ಹಿ ಸಞ್ಚರನ್ತಿ ಜನನವ್ಯಾಧ್ಯಾಧಿಮೃತ್ಯಾರ್ತಿಭಿಃ |
ಕ್ರೂರಾಸ್ಸನ್ತಿ ಚ ರೌರವಾದಿನರಕಾ ಏವಂ ಹಿ ಯಾತ್ರಾ ನೃಣಾಂ
ದಾಸ್ಯೇ ಮಾಂ ಮಣಿವರ್ಣ! ತೇ ಕುರು ಸದಾ ಮಾ ಮೋಹಯ ಶ್ರೀಧರ||

ತಾ|| ಸಮುದ್ರಜಲಾವೃತವಾದ ಈ ವಿಶಾಲವಾದ ಪೃಥಿವಿಯಲ್ಲಿ ಚೇತನರು ನಿಂತು ಸಂಚರಿಸುತ್ತ ಜನನ ಮರಣ ವ್ಯಾಧಿ ಜರೆಗಳಿಂದ ಪೀಡಿತರಾಗಿ, ಇದರ ಮೇಲೂ ಘೋರವಾದ ರೌರವಾದಿ ನರಕಗಳನ್ನೂ ಅನುಭವಿಸುತ್ತಾರೆ. ಇವೆಲ್ಲಾ ಎಂತಹ ಲೋಕಯಾತ್ರಾಸ್ವಭಾವಗಳು! (ನಾನು ಇದನ್ನೆಲ್ಲಾ ಸಹಿಸಲಾರೆನು) ಆದುದರಿಂದ ನನ್ನನ್ನು ನೀನು ವಂಚಿಸದೆ (ಮೋಹಪಡಿಸದೆ) ಈಗಲೇ ಸ್ವೀಕರಿಸು.

(೬) ಮಱುಕ್ಕಿ ವಲ್ವಲೈಪ್ಪಡುತ್ತಿ ಕ್ಕುವೈತ್ತಿಟ್ಟು ಕೊಣ್ಡ್ಬರ್,
ಅಱಪ್ಪೊರುಳ್ಳೈ ಯಱಿನ್ದೋರಾರಿವೈ ಯೆನ್ನವುಲಕಿಯಱ್ಕೈತ್ತಿ
ವೆಱಿತ್ತುಳವ ಮುಡಿಯಾನೇ ವಿನ್ನೈಯೇನ್ನೈ ಯುನಕ್ಕಡಿಮೈ
ಅಱಕ್ಕೊಣ್ಡಾಯ್, ಇನಿಯೆನ್ನಾರವಮುದೇ
ಕೂಯುರುಳಾಯೇ.

ಪ್ರ|| ಮಞ್ಜಿಕ್ಕಿ–ಜನರ ಮನಸ್ಸನ್ನು ಕಲಕಿ (ಭಯೋತ್ಪಾದನವಂ ಮಾಡಿ), ವಲ್‌ವಲೈಪ್ಪಡುತ್ತಿ-ತನ್ನ ಮಹಾಪಾಶದಲ್ಲಿ ಸಿಕ್ಕಿಸಿ, ಕುಮೈತ್ತಿಟ್ಟು-ಪೀಡಿಸಿ, ಕೊನ್ರು–ಕೊಂಡು, ಉಣ್ಬಾರ್–ತಮ್ಮ ಉದರಭರಣವನ್ನು ಮಾಡುವರು. ಅಱಪ್ಪೊರುಳೈ–ಧರ್ಮಪುರುಷಾರ್ಥವನ್ನು, ಅಱಿನ್ದು–ತಿಳಿದು, ಓರಾರ್ – ನಿರೂಪಿಸುವುದಿಲ್ಲ (ಇದೇ ನಮಗೆ ಉಜ್ಜೀವನವೆಂದು ಪರಿಶೀಲಿಸುವುದಿಲ್ಲ.) ಇವೈ ಎನ್ನ ಉಲಕಿ ಯಲ್ಕ್ಕೈ–ಇವೆಲ್ಲಾ ಎಂತಹ ಲೋಕಸ್ವಭಾವಗಳು? ವೆಱಿತುಳವಮ್ – ಪರಿಮಳಭರಿತವಾದ ತುಳಸಿಯುಳ್ಳ, ಮುಡಿಯಾನೇ – ಕಿರೀಟವನ್ನು ಧರಿಸಿರುವವನೇ !, ವಿನೈಯೇನೈ–ಪಾಪಿಯಾದ ನನ್ನನ್ನು, ಉನಕ್ಕು – ನಿನಗೆ, ಅಱ – ಅನನ್ಯಾರ್ಹನಾಗಿ, ಅಡಿಮೈ ಕೊಣ್ಡಾಯ್–ದಾಸ್ಯವೃತ್ತಿಯಲ್ಲಿ ವಿನಿಯೋಗಿಸಿದವನೇ !, ಎನ್ ಆರಮುದೇ–ನನ್ನ ಪರಿಪೂರ್ಣಾಮೃತ ಸ್ವರೂಪನೇ !, ಇನಿ–ಇನ್ನುಮೇಲೆ (ಹೀಗೆ ನನಗೆ ಆರ್ತಿಯುಂಟಾದಮೇಲೆ) ಕೂಯರುಳಾಯ್–ಕೂಗಿ ನನ್ನನ್ನು ಸ್ವೀಕರಿಸು.

( ಸ–ಗಾ–ರ || )—

ಕ್ಷುದ್ರಾಃ ಕ್ಷೋಭಮುಪೇಹ ಬನ್ಧನಮಪಿ ಭೃಷ್ಟ್ವಾ ನೃಣಾಂ ಪೀಡನಂ
ಹಾ!ಹಾ! ಹನ್ತ! ವಧಂ ಚ ಕುರ್ವತ ಇಮೇ ಸ್ವಸ್ವೋದರಾರ್ಥಂ ಖಲಾಃ|
ಧರ್ಮಂ ನೈವ ವಿದುರ್ಜಗತ್ಯಹಹ! ಕಿಂ ಯಾತ್ರೇದೃಶೀ? ತೇಽಸ್ಮ್ಯಹಂ
ದಾಸೋಽಹೀ ತುಲಸೀಸ್ರಗಞ್ಚಿತ! ಸುಧಾಸಿನ್ಧೋ! ವೃಣುಷ್ವಾದ್ಯ ಮಾಮ್ ||

ತಾ|| ಕ್ಷುದ್ರರಾದವರು ಜನರ ಮನಸ್ಸನ್ನು ಕಲಕಿ ಅವರನ್ನು ತಮ್ಮ ಪಾಶದಲ್ಲಿ ಸಿಕ್ಕಿಸಿ ಪೀಡಿಸಿ ಕೊಂದು ಸ್ವೋದರಭರಣವಂ ಮಾಡುತ್ತಾರೆ. ಧರ್ಮಮಾರ್ಗವನ್ನೇ ಇವರು ಪರಿಶೀಲಿಸುವುದಿಲ್ಲ. ಇದೆಂತಹ ಲೋಕಸ್ವಭಾವವೋ! ಎಲೈ ದಿವ್ಯ ಕಿರೀಟಧಾರಿಯೇ! ಪಾಪಿಯಾದ ನನ್ನನ್ನೂ ನಿನ್ನ ದಾಸ್ಯವೃತ್ತಿಯಲ್ಲಿ ಸೇರಿಸಿ ಕೊಂಡಿರುತ್ತೀಯೆ! ನನ್ನ ಪೂರ್ಣಾಮೃತಸ್ವರೂಪನೇ! ಇನ್ನುಮೇಲೆ ನೀನು ವಿಲಂಬಮಾಡದೆ ನನ್ನನ್ನು ಕರೆದುಕೊಳ್ಳಬೇಕು.

(೭) ಆಯೇ ಯಿವ್ವುಲಕತ್ತು ನಿಱ್ಪನವುಮ್ ತಿರಿವನವುಮ್,
ನೀಯೇ ಮಱ್ಱೊರುಪೊರುಳುಮಿನ್ಱಿ ನೀ ನಿನ್ಱವಯಾಲ್,
ನೋಯೇ ಮೂಪ್ಪಿಱಪ್ಪಿಱಪ್ಪಿಣಿಯೇ
ಯೆನ್ಱಿವೈಯೊೞಿಯ
ಕೂಯೇ ಕೊಳ್ಳಡಿಯೇನೈ ಕೊಡುವುಲಕಮ್ ಕಾಟ್ಟೇಲೇ.

ಪ್ರ॥ ಇ ಉಲಕತ್ತು – ಈ ಲೋಕದಲ್ಲಿ, ನಿರ್ಪ್ಪನವುಮ್ – ನಿಲ್ಲೋಣವೂ, ತಿರಿವನವುಮ್–ಸಂಚರಿಸೋಣವೂ, ನೀಯೇ ಆಯ್–ನೀನೇ ಆಗಿ, ಮಱ್ಱು ಒರು ಪೊರುಳುಮ್ – ಬೇರೆ ಒಂದುಪದಾರ್ಥವೂ, ಇನ್ಱಿ–ಇಲ್ಲದಂತೆ, ನಿ–ನೀನು, ನಿನ್ಱ ನೈಯಾಲ್–ನಿಂತಿರೋಣದರಿಂದ, (ತನ್ನ ಶರೀರದ ವ್ಯಾಧಿಯನ್ನು ತಾನೇ ನಿವಾರಣ ಮಾಡಿಕೊಳ್ಳುವಂತೆ) ನೋಯೇ – ವ್ಯಾಧಿಯೂ, ಮೂಪ್ಪೇ – ವಾರ್ಧಕವೂ, ಪಿಱಪ್ಪೇ–ಜನನವೂ, ಇಱಪ್ಪೇ–ಮರಣವೂ, ಪಿಣಿಯೇ–ನೋವೂ, ಎನ್ಱ–ಎಂದು ಹೇಳಲ್ಪಟ್ಟ, ಇವೈ–ಇವುಗಳೆಲ್ಲಾ, ಒೞಿಯ–ನಾಶಹೊಂದುವಂತೆ, ಅಡಿಯೇನೈ–ದಾಸಭೂತನಾದ ನನ್ನನ್ನು, ಕೂಯೇ ಕೊಳ್–ಕರೆದುಕೋ; ಕೊಡು ಉಲಕಮ್–ದುಷ್ಟವಾದ (ಕ್ಲೇಶಜನಕವಾದ) ಈ ಲೋಕವನ್ನು, ಕಾಟ್ಟೇಲೇ–ನನ್ನ ಕಣ್ಣಿಗೆ ತೋರಿಸಬೇಡ.

( ಸ–ಗಾ–ರ ॥ )—

ಲೋಕೇಽಸ್ಮಿನ್ನಖಿಲಾತ್ಮಕೋಽಸ್ತಿ ಹಿ ಭವಾನೇವ ಸ್ವಯಂ ಸಞ್ಚರನ್
ಸ್ಥಿತ್ವಾ ಚಾಸ್ತಿ ನ ಕಿಞ್ಚಿದನ್ಯದಹಹ ! ತ್ವತ್ಸಂಶ್ರಿತಂ ಮಾಂ ಕುರು |
ಆಹೂಯ ಸ್ವಯಮೇವ ಮಾಂ ಜನಿಜರಾವ್ಯಾಧ್ಯಾಧಿಹೀನಂ ಕುರು
ಶ್ರೀಮನ್! ಕ್ಲೇಶಭರಾರ್ದಿತೇಽತ್ರ ಜಗತಿ ತ್ವಂ ಮಾಂ ನ ತು ಸ್ಥಾಪಯೇಃ॥

ತಾ॥ ಈ ಲೋಕದಲ್ಲಿ ನಿಂತು ಸಂಚರಿಸುತ್ತಿರುವ ಸಕಲವಸ್ತುಗಳೂ ನೀನೇ ಆಗಿರೋಣದರಿಂದ ನಿನ್ನನ್ನು ಹೊರತು ಬೇರೆ ಒಂದುಪದಾರ್ಥವೂ ಇಲ್ಲವಷ್ಟೆ. ಆದುದರಿಂದ (ನಿನ್ನ ಶರೀರದ ವ್ಯಾಧಿಯನ್ನು ನೀನೇ ನಿವಾರಣಮಾಡಿಕೊಳ್ಳುವಂತೆ) ಈ ಲೋಕದ ಜನ್ಮ ಜರಾಮರಣ ವ್ಯಾಧ್ಯಾದಿಗಳೆಲ್ಲವನ್ನೂ ನಾಶಪಡಿಸುವಂತೆ ದಾಸನಾದ ನನ್ನನ್ನು ನಿನ್ನ ಸಾನ್ನಿಧ್ಯಕ್ಕೆ ಕರೆದುಕೋ. ಈ ದುಷ್ಟಲೋಕವನ್ನು ನನ್ನ ಕಣ್ಣಿಗೆ ತೋರಿಸಬೇಡ.

(೮) ಕಾಟ್ಟಿ ನೀ ಕರನ್ದುಮಿೞುಮ್ ನಿಲನೀರ್ ತೀವಿಶುಮ್ಬುಕಾಲ್,
ಈಟ್ಟಿ ನೀ ವೈತ್ತಮೈತ್ತ ಇಮೈಯೋರ್ ವಾೞ್ ತನಿಮುಟ್ಟೈ,
ಕೋಟ್ಟೈಯಿನಿಲ್ ಕೞಿತ್ತೆನ್ನೈ ಉನ್ ಕೊೞುಮ್
ಶೋದಿ ಉಯರತ್ತು,
ಕೂಟ್ಟರಿಯ ತಿರುವಡಿಕ್ಕಳ್ ಎಞ್ಞಾನ್ಱು ಕೂಟ್ಟುದಿಯೇ.

ಪ್ರ|| ಕಾಟ್ಟಿ-(ಪೂರ್ವಸೃಷ್ಟಿಯಲ್ಲಿ) ಪ್ರಕಾಶಪಡಿಸಿ, ನೀ--ನೀನು, ಕರನ್ದು (ಪ್ರಳಯ ದಶೆಯಲ್ಲಿ ತನ್ನ ಉದರದಲ್ಲೇ) ಮರೆಸಿ, ಉಮಿೞ್ನ್ದುಮ್-ಪುನಃ ಉದ್ಭವಿಸುವಂತೆ ಮಾಡುವ, ನಿಲನೀರ್‌ತೀವಿಶುಮ್ಬುಕಾಲ್-ಪೃಥಿವ್ಯಪ್ತೇಜಸ್ಸು-ಆಕಾಶ-ವಾಯುಗಳನ್ನು, ಈಟ್ಟಿ-(ಪಂಚೀಕರಣ ಪ್ರಕಾರದಿಂದ) ಸೇರಿಸಿ, ವೈತ್ತು-(ಇವುಗಳನ್ನೆಲ್ಲಾ) ಆವರಣವಾಗಿ ಮೇಲುಗಡೆ ಇಟ್ಟು, ಇವ್ವೈಯೋರ್ - ದೇವತೆಗಳಿಗೆ, ವಾೞ-ವಾಸಸ್ಥಾನವಾಗುವಂತೆ, ಅನ್ವೈತ್ತ-ಕಲ್ಪಿಸಿದ, ತನಿಮುಟ್ಟೈ-ಅದ್ವಿತೀಯವಾದ ಅಂಡವೆಂಬ, ಕೋಟ್ಟೈಯಿನ್ನೈ (ನಿಲ್)-ಮಹಾದುರ್ಗವನ್ನು, ಕೞಿತ್ತು-ದಾಟಿಸಿ, ಎನ್ನೈ-ನನ್ನನ್ನು, ಉನಕ್ಕೊೞ್ಮ್‌ಶೋದಿ-ನಿನ್ನ ಅಪಾರ ತೇಜೋಮಯವಾದ, ಉಯರತ್ತು - ಊರ್ಧ್ವಲೋಕವಾದ ಪರಮಪದದಲ್ಲಿ, ಕೂಟ್ಟರಿಯ-ಅತ್ಯನ್ತ ದುರ್ಲಭವಾದ, ತಿರುವಡಿಕ್ಕಳ್-ಪಾದಗಳನ್ನು, ಎಞ್ಞಾನ್ರು - ಯಾವಾಗ, ಕೂಟ್ಟುದಿ-ಸೇರುವಂತೆ ಕೃಪೆಮಾಡುತ್ತೀಯೋ !

( ಸ-ಗಾ-ರೆ || )—

**ವಿಶ್ವಂ ಸರ್ವಮಪಿ ಪ್ರಕಾಶ್ಯ ಜಠರೇ ಕೃತ್ವಾಽಪಿ ಚೋದ್ಗೀರ್ಯ ಚ**
**ಪ್ರೋದ್ಭಾವ್ಯಾಪಿ ಪೃಥಿವ್ಯಬಗ್ನಿಪವನಾಕಾಶಾನ್ ಬಹಿಸ್ಸ್ನ್ಯಸ್ಯ |**
**ದೇವಾದೀನಪಿ ತತ್ರ ಚಾಣ್ಡನಿಲಯಾನ್ ವಿಭ್ರಾಜಸೇ ತ್ವಂ ಹರೇ !**
**ಪ್ರಾಪ್ತುಂ ತೇ ಪರಮಂ ಪದಂ ಪದಯುಗೇ ತೇ ಮಾಂ ಕದಾ ಯೋಜಯೇಃ ||**

ತಾ|| ಸರ್ವಲೋಕಗಳನ್ನೂ ಪ್ರಕಾಶಪಡಿಸಿ ಪ್ರಳಯದಲ್ಲಿ ನುಂಗಿ ಪುನಃ ಸೃಷ್ಟಿಮಾಡಿ ಪಂಚಭೂತಗಳನ್ನೂ ಸೇರಿಸಿ ಆವರಣವಂಮಾಡಿ ನೀಮ ದೇವತೆಗಳಿಗೆ ವಾಸಸ್ಥಾನವಾಗಿ ಕಲ್ಪಿಸಿರುವ ಅಂಡವನ್ನೂ ಕೂಡ ನಾನು ದಾಟುವಂತೆ ಮಾಡಿ, ನನ್ನನ್ನು ನಿನ್ನ ನಿರವಧಿಕ ತೇಜೋಮಯವಾದ ಪರಮಪದದಲ್ಲಿ (ಬ್ರಹ್ಮಾದಿಗಳಿಗೂ ದುರ್ಲಭವಾದ) ನಿನ್ನ ಪಾದಾರವಿನ್ದಗಳಲ್ಲಿ ಯಾವಾಗ ಸೇರಿಸುವೆಯೋ ! (ಆ ಸಮಯವು ತಿಳಿದರೆ ನಾನು ಪ್ರಾಣವನ್ನು ಧರಿಸಿರಬಹುದೆಂದು ತಾತ್ಪರ್ಯ.)

(೯) ಕೂಟ್ಟುದಿ ನಿನ್ ಕುರೈಕೞಲ್‌ಕಳಿವ್ವೈಯೋರುವರ್
ತೊೞಾವಕ್ಕೈ ಶೆಯ್ದು
ಆಟ್ಟುದಿ ನೀ ಯರವಣೈಯಾಯಮಡಿಯೋನುಮದುವತಿವರ್,
ವೇಳ್ಕೈಯೆಲ್ಲಾಮ್ ವಿಡುತ್ತೆನ್ನೈ ಯುನ್‌ತಿರುವಡಿಯೇ
ಶುಮನ್ದುೞಲ,
ಕ್ಕೂಟ್ಟರಿಯ ತ್ತಿರುವಡಿಕ್ಕಳ್ ಕೂಟ್ಟಿನೈಯಾನ್ ಕಣ್ಡೇನೇ.

ಪ್ರ|| ನೀ–ನೀನು, ಕುರ್ೈ–ನಿರತಿಶಯಭೋಗ್ಯವಾದ, ನೀಕ್ಕ್ರಲ್‌ಕಳ್–ನಿನ್ನ ಪಾದಗಳಲ್ಲಿ, ಕೂಟ್ಟುದಿ–(ಆಶ್ರಿತರನ್ನು) ಸೇರಿಸಿಕೊಳ್ಳುತ್ತೀಯೆ. (ಸ್ವಯತ್ನಪರ ರಾದರೆ) ಇವ್ವೈಯೋರುಮ್–ದೇವತೆಗಳೂ, ತ್ತೊಲ್ಡಾವಕೈ–ಕಂಡು ಅನುಭವಿಸಲಾರ ದಂತೆ, ಶೆಯ್ದು–ಮಾಡಿ, ಆಟ್ಟುದಿ – ಅಲೆಯುವಂತೆ ಮಾಡುತ್ತೀಯೆ. ಅರವಣೈ ಯಾಯ್–ಶೇಷಶಾಯಿಯೇ!, ಅದು–ಆ ನಿನ್ನ ಸ್ವಭಾವವನ್ನು, ಅಡಿಯೇನುಮ್– ದಾಸನಾದ ನಾನೂ, ಅಱಿನ್ದೇ–ತಿಳಿದು ಇರುತ್ತೇನೆ; (ಹೇಗೆಂದರೆ-) ವೇಳ್ಕೈಯೆಲ್ಲಾ ಮ್–ಇತರ ವಿಷಯಗಳಲ್ಲಿ ಅಭಿನಿವೇಶವನ್ನೆಲ್ಲಾ, ವಿಡುತ್ತು – (ಸವಾಸನವಾಗಿ) ಬಿಡಿಸಿ, ಎನ್ನೈ–ನನ್ನನ್ನು, ಉನ್ ತಿರುವಡಿಯೇ – ನಿನ್ನ ಭೋಗ್ಯತಮವಾದ ಪಾದ ಗಳನ್ನು, ಶುಮನ್ದು–ಶಿರಸಾವಹಿಸಿ, ಉಲ್ಲಾಲ–ಅನುಸಂಚಾರಮಾಡುವಂತೆ, ಕೂಟ್ಟ ಅರಿಯ-(ಎಂತಹ ದೊಡ್ಡವರಿಗೂ) ಹೊಂದಲು ದುರ್ಲಭವಾದ, ತಿರುವಡಿಕ್ಕಳ್– ಪಾದಗಳಲ್ಲಿ, ಕೂಟ್ಟನ್ನೈ–ಸೇರಿಸಿಕೊಂಡಿರುತ್ತೀಯೆ. ನಾನ್–ನಾನು, ಕಣ್ಡೇನ್ – ಇದ ನ್ನೆಲ್ಲಾ ಅನುಭವಿಸಿದೆನು ಏ–ನಿಶ್ಚಯ!

( ಸ–ಗಾ–ರ || )—

**ಭೋಗ್ಯೇ ತ್ವಚ್ಚರಣಾರವಿನ್ದಯುಗಳೇ ತ್ವಂ ಯೋಜಯಸ್ಯಾಶ್ರಿತಾನ್**
**ಪ್ರಾಜ್ಞೈರ್ದೇವಗಣೈರಪಿ ಸ್ವಯತನೈರ್ಗಮ್ಯೋ ನ ಹಿ ತ್ವಂ ಹರಿಃ |**
**ಸ್ವಾಮಿನ್! ನಾಗಶಯಾದ್ಯ ವೇದ್ಮಿ ಹೃದಯಂ ತೇಽಹಂ ಚ ದಾಸೋ ಜನೋ**
**ಮಾಂ ಚಾನನ್ಯಪರಂ ವಿಧಾಯ ತವ ಪಾದಾಬ್ಜೇ ಕಿಲಾಯೋಜಯಃ ||**

ತಾ|| ನೀನು ಆಶ್ರಿತರನ್ನು ನಿನ್ನ ಪಾದಗಳಲ್ಲಿ ಸೇರಿಸಿಕೊಳ್ಳುತ್ತೀಯೆ; ಇತರ ರನ್ನು (ದೇವತೆಗಳೇ ಆದರೂ) ಕೈಬಿಟ್ಟು ಅಲೆಯುವಂತೆ ಮಾಡುತ್ತೀಯೇ; ಎಲೈ ಶೇಷಶಾಯಿಯೇ! ನಿನ್ನ ಇಂತಹ ಸ್ವಭಾವವನ್ನು ನಾನು ತಿಳಿದಿರುತ್ತೇನೆ. ನನಗೆ ಇತರ ವಿಷಯಗಳಲ್ಲಿ ರುಚಿಯನ್ನೆಲ್ಲಾ ಬಿಡಿಸಿ, ನಾನು ಭೋಗ್ಯತಮವಾದ ನಿನ್ನ ಪಾದಗಳನ್ನೇ ಶಿರಸಾವಹಿಸಿ ಸಂಚರಿಸುವಂತೆ ಮಾಡಿ, ಅತ್ಯನ್ತ ದುರ್ಲಭವಾದ ನಿನ್ನ ಪಾದಗಳಲ್ಲಿಯೇ ನನ್ನನ್ನೂ ಸೇರಿಸಿಕೊಂಡಿರುತ್ತೀಯೆ. ಇದನ್ನೆಲ್ಲಾ ನಾನು ಅನುಭವಿಸಿಯೇ ಇರುತ್ತೇನೆ, ಇದು ಸತ್ಯ!

(೧೦) **ಕಣ್ಡು ಕೇಟ್ಟುತ್ತುಱ್ಱುಮೋನ್ದುಣ್ಡುಲುವೈಯ್ದುಕ್ಕರುವಿ**
**ಕಣ್ಡವಿನ್ಬಮ್, ತೆರಿವರಿಯವಳವಿಲ್ಲಾ ಚ್ಚಿಱ್ಱಿನ್ಬಮ್,**
**ಒಣ್ತೊಡಿಯಾಳ್ ತಿರುಮಕಳುಮ್ ನೀಯುಮೇ ನಿಲಾನಿಱ್ಱ**
**ಕಣ್ಡಶದಿರ್ ಕಣ್ಡೊಱಿನ್ದೇನಡೈನ್ದೇನುನ್ ತಿರುವಡಿಯೇ.**

ಪ್ರ|| ಕಣ್ಡು–(ರೂಪವನ್ನು) ಕಂಡು, ಕೇಟ್ಟು–(ಶಬ್ದವನ್ನು) ಕೇಳಿ, ಉಱ್ಱು– (ಸ್ಪರ್ಶವನ್ನು) ಅನುಭವಿಸಿ (ಮುಟ್ಟಿ), ಮೋನ್ದು – (ಗನ್ಧವನ್ನು) ಅಘ್ರಾಣಿಸಿ, ಉಣ್ಡು–(ರಸವನ್ನು) ಭುಜಿಸಿ, ಉಲಾವುಮ್ – ಸಂಚರಿಸುತ್ತಿರುವ, ಐಙ್ಕರುವಿ. ಪಂಚೇನ್ದ್ರಿಯಗಳಿಂದಲೂ, ಕಣ್ಡ–ಅನುಭವಿಸಿದ, ಇನ್ಬಮ್–ಐಶ್ವರ್ಯಸುಖವೂ, ತೆರಿವು ಅರಿಯ–ತಿಳಿಯಲು ಅಶಕ್ಯವಾದ, ಅಳವಿಲ್ಲಾ – ಅಪರಿಚ್ಛಿನ್ನವಾದ, ಶಿಱ್ಱಿ ನ್ಬಮ್ (ಶಿಱು ಇನ್ಬಮ್)–(ಭಗವದನುಭವಕ್ಕಿಂತ ಅತ್ಯಲ್ಪವಾದ) ಆತ್ಮಾನುಭವ ಸುಖವೂ, ಒಣ್ತೊಡಿಯಾಳ್ – ಶ್ಲಾಘ್ಯವಾದ ಹಸ್ತಾಭರಣಗಳುಳ್ಳ, ತಿರುಮಕ ಳುಮ್–ಲಕ್ಷ್ಮೀದೇವಿಯೂ, ನೀಯುಮೇ–ನೀನೂ ಕೂಡಿ, ನಿಲಾನಿಱ್ಪ–ನಿಂತಿರು ವಂತೆ, ಕಣ್ಡ–ನಿರೂಪಿಸಿದ, ಶದಿರ್ – ಒಳ್ಳೇ ಉಪಾಯವನ್ನು, ಕಣ್ಡು–(ಪ್ರತ್ಯಕ್ಷ ವಾಗಿ) ಕಂಡು, ಒೞಿನ್ದೇನ್ – (ಆ ಐಶ್ವರ್ಯ–ಕೈವಲ್ಯಗಳೆಂಬ ಕ್ಷುದ್ರಪುರುಷಾರ್ಥ ಗಳನ್ನು) ತ್ಯಜಿಸಿದೆನು. ಉನ್ ತಿರುವಡಿ–(ಪರಮಪುರುಷಾರ್ಥವಾದ) ನಿನ್ನ ಪಾದ ಗಳನ್ನೇ, ಅಡೈನ್ದೇನ್–(ಅನುಭವಿಸುವಂತೆ) ಹೊಂದಿದೆನು.

( ಸ–ಗಾ–ರ || )—

**ದೃಷ್ಟ್ವಾ ಕರ್ಣ್ಯ ಪರಿಸ್ಪೃಶನ್ನಪಿ ಕಿಲಾಘ್ರಾಯಾಪಿ ಭುಕ್ತ್ವೇನ್ದ್ರಿಯೈ–**
**ರ್ನಾನಾಭೋಗ್ಯಸುಖಂ ತ್ಯಜನ್ನಪಿ ಚ ತಾಮಾತ್ಮಾನುಭೂತಿಂ ತ್ಯಜನ್ |**
**ಶ್ರೀದೇವೀಂ ರಮಣೀಯಭೂಷಣಯುತಾಂ ತ್ವಾಂ ಚಾಪ್ರಮೇಯಂ ಹರಿಂ**
**ದೃಷ್ಟ್ವಾ ಮೇ ಪುರುಷಾರ್ಥಮಪ್ರತಿಭಟಂ ಪ್ರಾಪ್ತೋಽಸ್ಮಿ**
**ತೇಽಙ್ಘ್ರಿದ್ವಯಮ್ ||**

ತಾ|| ಶಬ್ದಸ್ಪರ್ಶರೂಪರಸಗನ್ಧಗಳನ್ನು ಹೊಂದಿ ವಿಷಯಗಳಲ್ಲಿ ಸಂಚರಿ ಸುವ ಪಂಚೇನ್ದ್ರಿಯಗಳಿಂದಲೂ ಅನುಭವಿಸಿದ ಐಶ್ವರ್ಯವೂ, ತಿಳಿಯಲಶಕ್ಯವಾದ ಮಹಾಪುರುಷಾರ್ಥವೆಂಬ ಕೈವಲ್ಯವೂ (ಆತ್ಮಾನುಭವವೂ) ಅತ್ಯಲ್ಪವಾಗಿ ತೋರು ವಂತೆ, ಲಕ್ಷ್ಮೀದೇವಿಯನ್ನೂ ನಿನ್ನನ್ನೂ ಸಾಕ್ಷಾತ್ತಾಗಿ ಕಂಡು ಅನುಭವಿಸುವ ಉಪಾಯವನ್ನು ತಿಳಿದು, ಆ ಐಶ್ವರ್ಯಕೈವಲ್ಯಗಳನ್ನು ಕ್ಷುದ್ರವೆಂದು ನಾನು ತ್ಯಜಿಸಿ ದೆನು. ನಿನ್ನ ಪಾದಗಳನ್ನೇ ಪರಮಪುರುಷಾರ್ಥವೆಂದು ತಿಳಿದು ಆಶ್ರಯಿಸಿದೆನು.

**(೧೧) ತಿರುವಡಿಯೈ, ನಾರಣನೈ, ಕ್ಕೇಶವನೈ, ಪ್ಪರಂಶುಡರೈ**
**ತ್ತಿರುವಡಿಶೇರ್ವದು ಕರುದಿ ಚ್ಚೆೞುಮ್ ಕುರುಕೂರ್**
**ಚ್ಚಡಕೋಪನ್,**
**ತಿರುವಡಿಮೇಲುರೈತ್ತ ತಮಿೞಾಯಿರತ್ತುಳಿಪ್ಪತ್ತುಮ್,**
**ತಿರುವಡಿಯೇ ಯಡೈವಿಕ್ಕುಮ್ ತಿರುವಡಿಶೇರ್ನ್ದೊೞುಮಿನೇ**

ಪ್ರ|| ತಿರುವಡಿಯ್ಗೈ-ಸರ್ವಶೇಷಿಯಾದ, ನಾರಣನ್ನೈ-(ಸರ್ವಾನ್ತರಾತ್ಮನಾದ) ನಾರಾಯಣನನ್ನು, ಕೇಶವನ್ನೈ - (ಕೇಶಿಹನ್ತಾಆದ=ಶತ್ರುನಾಶಕನಾದ) ಕೇಶವನನ್ನು, ಪರಂಶುಡರೈ-"ಪರಂಜ್ಯೋತಿಃ'' ಎಂಬ ಶ್ರೀಕೃಷ್ಣರೂಪಿಯಾದ ಪರಮಾತ್ಮನನ್ನು ಕುರಿತು, ತಿರುವಡಿಶೇರ್ವಡು ಕರುದಿ - ಅವನ ಪಾದಗಳನ್ನು ಹೊಂದಲು ಆಶೆಪಟ್ಟು, ಶ್ರೀಮ್ ಕುರುಕೂರ್-ರಮಣೀಯವಾಗಿ ಭೋಗ್ಯವಾಗಿರುವ ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪರ್-ನಮ್ಮಾಳ್ವಾರ್ರು, ತಿರುವಡಿಮೇಲ್-ಅವನ ಪಾದಗಳಮೇಲೆ, ಉರೈತ್ತ-ಹೇಳಿದ (ರಚಿಸಿದ), ತಮಿೞ್ ಆಯಿರತ್ತುಳ್-ದ್ರಾವಿಡ ಪ್ರಬನ್ಧವಾದ ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್-ಈ ದಶಕವೂ, ತಿರುವಡಿಯೇ-ಆ ಭಗವಚ್ಚರಣಗಳನ್ನೇ, ಅಡೈವಿಕ್ಕುಮ್-ಹೊಂದಿಸುವುದು. ತಿರುವಡಿ-ಆ ಪಾದಗಳನ್ನೇ, ಶೇರ್ನ್ದು - ಆಶ್ರಯಿಸಿ, ಒನ್ರುಮಿನೇ - (ಪೃಥಕ್ ಸ್ಥಿತಿಯಿಲ್ಲದಂತೆ) ಒಂದಾಗಿ ಸೇರಿ ಕೈಂಕರ್ಯಮಾಡಿರಿ.

( ಸ-ಗಾ-ರ || )—

ಸರ್ವೇಷಾಂ ಜಗತಾಂ ಶರಣ್ಯಮಪಿ ತಂ ನಾರಾಯಣಂ ಕೇಶವಂ
ಜ್ಯೋತಿಶ್ಚಾಪಿ ಪರಂ ಸ್ವಮನ್ವಪಿ ಚ ತತ್ಪಾದಾಬ್ಜಸಕ್ತಾಶಯಃ |
ಭಕ್ತ್ಯಾ ಶ್ರೀಕುರುಕೇಶ್ವರಶ್ಶಠರಿಪುಃ ಪ್ರೋಚೇ ಸಹಸ್ರಂ ಶುಭಂ
ತತ್ರೇದಂ ದಶಕಂ ಚ ತತ್ಪದಯುಗಂ ಸಮ್ಪ್ರಾಪಯೇತ್ಪ್ರಾಪ್ನುತ ||

ತಾ|| ಸರ್ವಲೋಕಶರಣ್ಯನಾದ ನಾರಾಯಣನಾಗಿಯೂ ಕೇಶವನಾಗಿಯೂ ಪರಜ್ಯೋತಿಸ್ಸ್ವರೂಪನಾಗಿಯೂ ಇರುವ ಭಗವನ್ತನನ್ನು ಕುರಿತು ಶ್ರೀ ಕುರುಕಾಪುರೀಶ್ವರರಾದ ಶಠಕೋಪಮುನಿವರ್ಯರು ಅವನ ಪಾದಸಂಶ್ರಯಕ್ಕಾಗಿ ರಚಿಸಿರುವ ದ್ರಾವಿಡ ದಿವ್ಯಪ್ರಬನ್ಧವಾದ ಸಹಸ್ರಪದ್ಯಮಾಲೆಯೊಳು ಈ ದಶಕವು ಪಠನಮಾಡುವವರಿಗೆಲ್ಲಾ ಅವನ ಚರಣಾರವಿನ್ದ ಪ್ರಾಪ್ತಿಯನ್ನುಂಟುಮಾಡುವುದು. ಆದುದರಿಂದ ಆ ಚರಣಯುಗಳವನ್ನೇ ಎಲ್ಲರೂ ಹೊಂದಿ ನಿತ್ಯಕೈಂಕರ್ಯವಂಮಾಡಿ ಕೃತಾರ್ಥರಾಗಿರಿ.

( ದ್ರ-ಉ-ಸಂ || )—

ಶೋಚನ್ಮುನಿಸ್ಸ್ವಸದೃಶಂ ಚ ಸಹಾಯಮಿಚ್ಛನ್
ಲೋಕಂ ವಿಲೋಕ್ಯ ವಿಪರೀತರುಚಿಂ ವಿಷಣ್ಣಃ |
ಅತ್ರತ್ಯವಾಸಮಸಹನ್ ಹರಿಣಾ ಸ್ವವಾಸಂ
ವೈಕುಣ್ಠಕೇ ಪ್ರಕಟಿತಂ ನವಮೇ ದದರ್ಶ ||

( ದ್ರ--ಉ--ತಾ--ರ || )—

ಕಾರುಣ್ಯಾದಬ್ಧಿಮಾಥೀ ತದುಪರಿಶಯಿತಸ್ತತ್ಸಮಾನಾಙ್ಗವರ್ಣಃ
ಖ್ಯಾತೌದಾರ್ಯಸ್ಸ್ವದಾನೇ ರುಚಿರಮಣಿರುಚಿರ್ನೇಷತೋಽತೀವ ಭೋಗ್ಯಃ |
ಆತ್ಮತ್ವೇನಾನುಭಾವ್ಯೋ ದುರಧಿಗಮಪದೋ ಬನ್ಧಮೋಕ್ಷಸ್ವತನ್ತ್ರ-
ಸ್ತ್ವನ್ಯಪ್ರೇಮೋಪರೋಧೀ ಸ್ವದತ ಇಹ ವಿಭುಸ್ತತ್ಪದೋತ್ಕಣ್ಠಿತಾಯ ||

ತಾಪ್ಯೈಸ್ಸಮ್ಪನ್ನಿಧುಃಖೈಸ್ಸ್ವವಿಭವಮರಣ್ಯೈಸ್ತಾಪಸ್ಯೈದ್ಭೋಗ್ಯಸಙ್ಗೈ-
ದುರ್ಗತ್ಯಾಜ್ಞಾತಿವೃತ್ತೇರನಿತರವಿಧುತೇರಣ್ಡಕಾರಾನಿರೋಧಾತ್ |
ಪ್ರಹ್ವೀಭಾವೋಜ್ಝಿತತ್ವಾತ್ಪ್ರಲಘುಸುಖಪರಿಷ್ವಙ್ಗತಶ್ಚಾತಿಶೋಚ್ಯಂ
ವಿಶ್ವಂ ದ್ರಷ್ಟುಂ ನ ಶಕ್ತೋ ನಿಜಪದನಯನೇ ನಾಥತಿಸ್ಮ ಸ್ವನಾಥಮ್||

ಸ್ವಾನಾಂ ನಿರ್ವಾಹಕತ್ವಾದಹಿಪತಿಶಯನಾದಬ್ಧಿವರ್ಣಸ್ವಭಾವಾ-
ದತ್ಯನ್ತೋದಾರಭಾವಾದ್ವಲಭಿದುಪಲವದ್ದರ್ಶನೀಯತ್ವಯೋಗಾತ್ |
ಸನ್ಮೌಳಿತ್ವಾತ್ತುಲಸ್ಯಾ ಪ್ರಿಯಕರಣಮುಖ್ಯೈರಣ್ಡಸೃಷ್ಟ್ಯಾ ಪಟುತ್ವಾತ್
ಸುಪ್ರಾಪತ್ವಾದಿಭಿಸ್ತಂ ಫಲಮತುಲಮನ್ವೈದ್ಭೇಜುಷಾಮೇಷ ನಾಥಮ್ ||

(ಈ ನವಮದಶಕದ ಸಾರಾಂಶ)—

ಈ ಒಂಬತ್ತನೆಯದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಈ ಲೋಕದಲ್ಲಿರುವ ಚೇತನರ ನಾಸ್ತಿಕ್ಯವನ್ನೂ ದೌರಾತ್ಮ್ಯವನ್ನೂ ಕಂಡು ಸಹಿಸಲಾರದೆ, ತಮ್ಮ ಈ ಲೋಕವಾಸವನ್ನು ಬಿಟ್ಟು ಪರಮಪದವನ್ನು ಸೇರಬೇಕೆಂಬ ಕುತೂಹಲದಿಂದ, ಭಗವನ್ತನ ಕಾರುಣ್ಯ–ಸೌಶೀಲ್ಯ–ಸೌಲಭ್ಯ–ಸೌನ್ದರ್ಯ–ವಾತ್ಸಲ್ಯೌದಾರ್ಯಾದಿ ಮಹಾ ಗುಣಗಳನ್ನೆಲ್ಲಾ ಅನುಭವಿಸಿ ಸನ್ತುಷ್ಟರಾಗಿ, ಈ ಲೋಕದ ಐಶ್ವರ್ಯ—ಕೈವಲ್ಯಾದಿ ಕ್ಷುದ್ರಪುರುಷಾರ್ಥಗಳನ್ನೆಲ್ಲಾ ತ್ಯಜಿಸಿ, ಪರಮಪದದಲ್ಲಿ ಪರಪುರುಷಾರ್ಥವಾದ ಭಗವಚ್ಚರಣಯುಗಳವನ್ನೇ ಮಾನಸಾನುಭವದಿಂದ ಹೊಂದಿ ಕೃತಾರ್ಥರಾಗಿದಾರೆ.

ಶ್ರೀಃ

# ಚತುರ್ಥಶತಕದಲ್ಲಿ—ದಶಮದಶಕ.

(ಒನ್ರುಮ್ ತೇವುಮ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ದೇವತಾನ್ತರ ಭಜನಮಾಡುವವರನ್ನು ನೋಡಿ ಕಾರುಣ್ಯದಿಂದ ಅವರೂ ಉಜ್ಜೀವಿಸಲಿ—ಎಂದು ಸರ್ವೇಶ್ವರನಾದ ಶ್ರೀಮನ್ನಾರಾಯಣನ ಪರತ್ವವನ್ನು ಕುರಿತು ಉಪದೇಶವಂ ಮಾಡುತ್ತಾರೆ. ಈ ದಶಕವು ಶ್ರೀ ಕುರುಕಾಪುರೀಶ್ವರ ವಿಷಯಕವಾದುದು.)

(೧) ಒನ್ರುಮ್ ತೇವುಮುಲಕುಮುಯಿರುಮ್
ಮಟ್ರುಮ್ ಯಾದುಮಿಲ್ಲಾ,
ಅನ್ರು, ನಾನ್ಮುಕನ್ ತನ್ನೊಡು
ತೇವರುಲಕೋಡುಯಿರ್‌ಪಡೈತ್ತಾನ್,
ಕುನ್ರಮ್‌ಪೋಲ್ ಮಣಿಮಾಡನೀಡು
ತಿರುಕ್ಕುರುಕೂರದನುಳ್
ನಿನ್ರವಾದಿಪ್ಪಿರಾನ್‌ನಿಱ್ಕ ಮಟ್ರೈತ್ತೆಯ್ವಮ್ ನಾಡುದಿರೇ.

ಪ್ರ॥ ಒನ್ರುಮ್—ಸ್ವರೂಪೈಕ್ಯವಂ ಹೊಂದುವಂತೆ ಲಯಿಸುವ, ತೇವುಮ್—ದೇವಜಾತಿಯೂ, ಉಲಕುಮ್ – ಲೋಕವೂ, ಉಯಿರುಮ್ – (ಮನುಷ್ಯಾದಿ) ಪ್ರಾಣಿವರ್ಗವೂ, ಮಟ್ರುಮ್ – (ಸಮಷ್ಟಿರೂಪ) ಸಕಲ ಪದಾರ್ಥಗಳೂ, ಯಾದುಮ್—ಇತರ ಸಕಲಪದಾರ್ಥಗಳೂ, ಇಲ್ಲಾ ಅನ್ರು – ಇಲ್ಲದೆ ಇರುವಾಗ (ಪ್ರಳಯವಂ ಹೊಂದಿದಾಗ), ನಾನ್ಮುಕನ್‌ತನ್ನೊಡು—ಚತುರ್ಮುಖನೊಡನೆ ಸೇರಿ, ತೇವರ್ ಉಲಕು ಉಯಿರ್ – ದೇವತೆಗಳನ್ನೂ ಲೋಕಗಳನ್ನೂ ಪ್ರಾಣಿವರ್ಗಗಳನ್ನೂ, ಪಡೈತ್ತಾನ್—ಸೃಷ್ಟಿಮಾಡಿದವನಾದ, ಕುನ್ರಮ್‌ಪೋಲ್– ಪರ್ವತದಂತೆ ಇರುವ, ಮಣಿಮಾಡಮ್—ರತ್ನಮಯವಾದ ಉಪ್ಪರಿಗೆಗಳು, ನೀಡು—ಉನ್ನತವಾಗಿ ಪ್ರಕಾಶಿಸುತ್ತಿರುವ, ತಿರುಕ್ಕುರುಕೂರದನುಳ್ – ಶ್ರೀ ಕುರುಕಾಪುರಿಯಲ್ಲಿ, ನಿನ್ರ—

ನಿಂತಿರುವ, ಆದಿಪ್ಪಿರಾ‌ - ಆದಿನಾಥನು (ಜಗತ್ಕಾರಣಭೂತನಾದ ಸ್ವಾಮಿಯು), ನಿಳ್ಪ-ಸನ್ನಿಹಿತನಾಗಿರುವಲ್ಲಿ, ಮಱ್ಱೈತ್ತೈಯ್ವಮ್-ಬೇರೆ ದೇವತೆಯನ್ನು, ನಾಡುದಿರೇ-(ನೀವು) ಹುಡುಕುತ್ತೀರಲ್ಲವೇ ? (ಇದು ನಿಮ್ಮ ಮೌಢ್ಯವನ್ನು ಸೂಚಿಸುವುದಿಲ್ಲವೇ ?)

( ಸ-ಗಾ-ರ ॥ )—

**ದೇವಾಶ್ಚಾಪಿ ಯದಾ ನ ಸನ್ತಿ ಭುವನಾನ್ಯಾತ್ಮಾನ ಏವಂ ತಥಾ**
**ಸರ್ವಂ ನಾಸ್ತಿ ತದಾ ಚತುರ್ಮುಖಮುಖಾ‌ ದೇವಾಂಶ್ಚ ಲೋಕಾ‌ ಸೃಜ‌।**
**ಜೀವಾಂಶ್ಚಾಪ್ಯಯಮಾದಿನಾಥ ಇಹ ಹಿ ಶ್ರೀರತ್ನಸೌಧಾವೃತೇ**
**ಭಾತ್ಯೇವಂ ಕುರುಕಾಪುರೇ ! ಕಿಮಿತರದ್ದೈವನ್ತು ಮೃಗ್ಯಂ ಚ ವಃ ? ॥**

ತಾ ॥ ದೇವಲೋಕ ಮನುಷ್ಯಲೋಕಾದಿಗಳೂ ಸಕಲ ಪದಾರ್ಥಗಳೂ ಲಯಿಸಿ ಇರುವಾಗ, ತನ್ನ ಸಂಕಲ್ಪದಿಂದ ಚತುರ್ಮುಖನೊಡನೆ ಸೇರಿ ಸಕಲ ದೇವಲೋಕ ಮನುಷ್ಯಲೋಕಾದಿಗಳನ್ನೂ ಸೃಷ್ಟಿಮಾಡಿದವನಾದ ಶ್ರೀ ಕುರುಕಾ ಪುರೀನಾಥನು (ಆದಿನಾಥನು) ಸನ್ನಿಹಿತನಾಗಿರುವಲ್ಲಿ ನೀವು ದೇವತಾನ್ತರವನ್ನು ಹುಡುಕುತ್ತೀರಲ್ಲಾ ! (ಇದು ನಿಮ್ಮ ಮೌಢ್ಯಕೃತ್ಯವಲ್ಲವೇ ? —ಇದನ್ನು ಬಿಟ್ಟು ಅವನನ್ನೇ ಭಜಿಸಿರಿ—ಎಂದು ತಾತ್ಪರ್ಯ.)

(೨) ನಾಡಿ ನೀರ್‌ವಣಙ್ಗುಮ್ ದೆಯ್ವಮುಮುಮ್ಮೈಯುಮುನ್
ಪಡೈತ್ತಾ‌,
ವೀಡಿಲ್ ಶೀರ್ ಪುಕಳ್ಆದಿಪ್ಪಿರಾನವ‌ ಮೇವಿಯುಱೈ
ಕೋಯಿಲ್,
ಮಾಡಮಾಳಿಕೈ ಶೂಳ್‌ನ್ದಳಕಾಯ ತಿರುಕ್ಕುರುಕೂರದನುಳ್,
ಪಾಡಿಯಾಡಿ ಪ್ಪರವಿ ಚ್ಚೆನ್ಮಿ‌ಕಳ್ ಪಲ್ಲುಲಕೀರ್ ಪರನ್ದೇ.

ಪ್ರ॥ ನೀರ್-ನೀವುಗಳು, ನಾಡಿ-ನಿರೂಪಿಸಿ, ವಣಙ್ಗುಮ್ - ನಮಸ್ಕರಿಸುವ, ದೆಯ್ವಮುಮ್-ದೇವತೆಗಳನ್ನೂ, ಉಮ್ಮೈಯುಮ್-ನಿಮ್ಮನ್ನೂ, ಮುನ್-ಪೂರ್ವ ಕಾಲದಲ್ಲಿ, ಪಡೈತ್ತಾನ್-ಸೃಷ್ಟಿಮಾಡಿದವನಾಗಿ, ವೀಡಿಲ್‌ಶೀರ್ - ಅವಿಚ್ಛಿನ್ನವಾದ ನಿತ್ಯಕಲ್ಯಾಣಗುಣಗಳುಳ್ಳವನೆಂದು, ಪುಕಳ್-ಖ್ಯಾತಿಯುಳ್ಳ, ಆದಿಪ್ಪಿರಾ‌ ಅವ‌-ಪ್ರಥಮೋಪಕಾರಕನಾದ ಆ ಸ್ವಾಮಿಯು, ಮೇವಿ-(ಆಶ್ರಿತಾಭಿಮುಖ್ಯಾರ್ಥವಾಗಿ)

**ಹೊಂದಿಕೊಂಡು, ಉತ್ತ್ರೈ**-ವಾಸಮಾಡುವ, **ಕೋಯಿಲ್** – ಸ್ಥಾನವಾದ, **ಮಾಡ ಮಾಳಿಕೈ ಶೂಳ್ನ್ದ** – ಭವನಗಳಿಂದಲೂ ಸೌಧಗಳಿಂದಲೂ ಪರಿವೃತವಾದ, **ಅಳ್ಗಾಯ**-ರಮಣೀಯವಾದ, **ತಿರುಕ್ಕುರುಕೂರದನ್ನೈ**-ಶ್ರೀಕುರುಕಾಪುರಿಯನ್ನು, **ಪಲ್ ಉಲಕೀರ್**-ನಾನಾಲೋಕವಾಸಿಗಳಿರಾ!, **ಪಾಡಿ**-ಹಾಡಿ, **ಆಡಿ**-(ಹರ್ಷದಿಂದ) ನರ್ತನಮಾಡಿ, **ಪರವಿ**-ಸ್ತೋತ್ರಮಾಡಿ, **ಪರನ್ದು ಶೆನ್ಮಿಕಳ್**-ಸರ್ವತ್ರ ಸಂಚಾರ ಮಾಡಿರಿ.

(ಸ–ಗಾ–ರ || )—

ಯುಷ್ಮಾಕಂ ಕಿಲ ದೈವತಂ ಚ ಸಕಲಂ ಯುಷ್ಮಾಂಶ್ಚ ಪೂರ್ವಂ ಸೃಜನ್
ನಿತ್ಯಾನನ್ತಗುಣಾಮ್ಬುರಾಶಿರಯಮೇವಾಸ್ತ್ಯಾದಿನಾಥೋ ಹರಿಃ |
ಅಸ್ಯೇದಂ ಕಿಲ ಸನ್ನಿಧಾನಮಖಿಲೈರ್ಲೋಕೈರ್ಭವದ್ಭಿಸ್ಸದಾ
ಸ್ತೋತವ್ಯಂ ಕುರುಕಾಪುರಂ ಮಣಿಮಯಂ ಗಾನೈಶ್ಚ ನೃತ್ತೈಶ್ಶುಭೈಃ ||

ತಾ|| ನೀವುಗಳು ಭಜಿಸುವ ದೇವತಾನ್ತರಗಳನ್ನೂ ನಿಮ್ಮನ್ನೂ ಸೃಷ್ಟಿಮಾಡಿದ ನಿತ್ಯಕಲ್ಯಾಣಗುಣಭರಿತನಾದ ಆದಿನಾಥನ ವಾಸಸ್ಥಾನವಾದ ಶ್ರೀಕುರುಕಾಪುರಿಯು ದಿವ್ಯಭವನ ಸೌಧಪರಿವೃತವಾಗಿ ರಮಣೀಯವಾಗಿರುವುದರಿಂದ ಇದನ್ನು ಸಕಲ ಲೋಕವಾಸಿಗಳಾದ ನೀವೆಲ್ಲರೂ ಸ್ತುತಿಸಿ ಗಾನನೃತ್ತಾದಿಗಳಿಂದ ಹೃಷ್ಟರಾಗಿ ಸಂಚರಿಸಿರಿ. (ಈ ಕುರುಕಾಪುರಿಯೇ ನಿಮಗೆ ಪರಮಪ್ರಾಪ್ಯವೆಂದು ಭಾವವು.)

(೩) ಪರನ್ದ ದೆಯ್ವಮುಮ್ ಪಲ್ಲುಲಕಮುಮ್
ಪಡೈತ್ತನ್ಱುಡನೇ ವಿೞುಙ್ಗಿ,
ಕ್ಕರನ್ದುಮಿೞ್ನ್ದು ಕಡನ್ದಿಡನ್ದದು ಕಣ್ಡುಮ್
ತೆಳಿಯಕಿಲ್ಲೀರ್,
ಶಿರಙ್ಗಳಾಲಮರರ್ ವಣಙ್ಗುಮ್ ತಿರುಕ್ಕುರುಕೂರದನುಳ್,
ಪರನ್ತಿರಮನ್ಱಿ ಪ್ಪಲ್ಲುಲಕೀರ್ ದೆಯ್ವಮ್ ಮಱ್ಱಿಲ್ಲೈ
ಪೇಶುಮಿನೇ.

ಪ್ರ|| **ಪರನ್ದ** – ವಿಸ್ತೀರ್ಣವಾದ, **ದೆಯ್ವಮುಮ್** – ದೇವತಾವರ್ಗವನ್ನೂ, **ಪಲ್ಉಲಕುಮ್** – ಬಹುವಿಧ ಲೋಕಗಳನ್ನೂ, **ಪಡೈತ್ತು** – ಸೃಷ್ಟಿಸಿ, **ಅನ್ಱು**–(ಪ್ರಳಯಬಂದ) ಆ ಸಮಯದಲ್ಲಿ, **ಉಡನೇ**–ಒಟ್ಟಿಗೆ, **ವಿೞುಙ್ಗಿ**–ನುಂಗಿ, **ಕರನ್ದು**–ಮರೆಸಿ ಇಟ್ಟು, **ಉಮಿೞ್ನ್ದು** – ಪುನಃ ಉದ್ಭವಿಸುವಂತೆ ಮಾಡಿ, **ಕಡನ್ದು**

(ತ್ರಿವಿಕ್ರಮಾವತಾರದಲ್ಲಿ ಅಳೆದು) ವಶೀಕರಿಸಿ, ಇಡನ್ದದು-(ವರಾಹರೂಪಿಯಾಗಿ) ಉದ್ಧರಿಸಿದುದನ್ನೂ (ಇದನ್ನೆಲ್ಲಾ), ಕಣ್ಡುಮ್-(ಪ್ರಮಾಣಗಳಿಂದ) ತಿಳಿದೂ, ತೆಳಿಯಕಿಲ್ಲೀರ್-(ನೀವು) ನಿರ್ಣಯಿಸಲಾರಿರಿ. ಅಮರರ್-ದೇವತೆಗಳೂ, ಶಿರಙ್ಗಳಾಲ್-ತಲೆಗಳಿಂದ, ವಣಙ್ಗುಮ್-ನಮಸ್ಕರಿಸುವ, ತಿರುಕ್ಕುರುಕೂರದನುಳ್-ಶ್ರೀ ಕುರುಕಾಪುರಿಯಲ್ಲಿ ನಿಂತಿರುವ, ಪರ್ನ-ಪರಾತ್ಪರನಾದ ಸ್ವಾಮಿಯ, ತ್ತಿರುವಾ-ಪ್ರಕಾರವಾಗಿರುವುದಲ್ಲದೆ, ಮಱ್ಱು ದೆಯ್ವಮ್-ಬೇರೊಂದು ದೈವವೂ, ಇಲ್ಲೈ-ಇಲ್ಲ; (ಹಾಗೆ ಉಂಟಾದರೆ) ಪಲ್‌ಉಲಕೀರ್ - ಸಕಲವಿಧಲೋಕವಾಸಿಗಳಾದ ನೀವು, ಪೇಶುಮಿ೯-ಹೇಳಿರಿ.

( ಸ-ಗಾ-ರ || )—

**ದೇವಾನಪ್ಯಖಿಲಾನಶೇಷಭುವನಂ ಸೃಷ್ಟ್ವಾ ಸ್ವಯಂ ಭಕ್ಷಯನ್**
**ಗುಪ್ತ್ವಾ ಚೋದ್ಗಿರತೀಹ ಮಾತಿ ಚ ಸಮುದ್ಧರ್ತಾಽಸ್ತಿ ಲೋಕಾಃ! ಪುನಃ|**
**ಏವಂ ಹನ್ತ! ವಿಲೋಕ್ಯ ವಿತ್ಥ ನ ಹಿ ಯದ್ದೇವೈಶ್ಚ ವನ್ದ್ಯೋ ಹರಿ-**
**ಸ್ವಾಮ್ಯಾಸ್ತೇ ಕುರುಕಾಪುರೇ ಕಿಮಪರಂ ದೈವಂ ಭವೇದ್ಬ್ರೂತ ಭೋಃ ||**

ತಾ|| ದೇವಾದಿಸಮಸ್ತಲೋಕಗಳನ್ನೂ ಸೃಷ್ಟಿಸಿ, ಪ್ರಳಯಕಾಲದಲ್ಲಿ ಅವುಗಳನ್ನೆಲ್ಲಾ ನುಂಗಿ ಉದರದಲ್ಲಿ ಮರೆಸಿ ಇಟ್ಟುಕೊಂಡು, ಪುನಃ ಸೃಷ್ಟಿಮಾಡಿ, ತ್ರಿವಿಕ್ರಮಾವತಾರದಲ್ಲಿ ಅಳೆದು ವಶೀಕರಿಸಿ ವರಾಹಾವತಾರದಲ್ಲಿ ಉದ್ಧರಿಸಿ— ಈ ಪ್ರಕಾರ ಭಗವನ್ತನು ಮಾಡಿದ ವ್ಯಾಪಾರಗಳನ್ನೆಲ್ಲಾ ನೀವು ಕೇಳಿ ತಿಳಿದಿದ್ದಾಗ್ಯೂ ಈದೃಶವೆಂದು ನಿರ್ಣಯಿಸಲಾರಿರಿ. ದೇವತೆಗಳಿಂದಲೂ ಸೇವ್ಯವಾದ ಶ್ರೀ ಕುರುಕಾಪುರೀನಾಥನಾದ ಪರಾತ್ಪರನನ್ನು ಬಿಟ್ಟರೆ ಬೇರೊಂದು ದೈವವುಂಟೆ? ಸಕಲ ಲೋಕವಾಸಿಗಳಾದ ನೀವುಗಳೆಲ್ಲರೂ ಆಲೋಚಿಸಿ ಹೇಳಿರಿ.

(೪) ಪೇಶನಿನ್ಱ ಶಿವನುಕ್ಕುಮ್ ಪಿರಮನ್ಱ ತನಕ್ಕುಮ್
ಪಿಱರ್ಕ್ಕುಮ್,
ನಾಯಕನವನೇ, ಕಪಾಲನನ್ಮೋಕ್ಕತ್ತು ಕ್ಕಣ್ಡು ಕೊಣ್ಮಿನ್,
ತೇಶಮಾಮದಿಳ್‌ಶೂಳ್‌ನ್ದಳಕಾಯ
ತಿರುಕುರುಕೂರದನುಳ್,
ಈಶಪಾಲೋರವಮ್ ಪತ್ತುದಲೆನ್ನಾವದಿಲಿಙ್ಗಿಯರ್ಕ್ಕೇ.

ಪ್ರ॥ ಪೇಶ ನ್ನಿನ-(ಈಶ್ವರತ್ವಪ್ರಖ್ಯಾತಿಯಿಂದ) ಕೀರ್ತಿತನಾಗಿ ನಿಂತಿರುವ, ಶಿವನುಕ್ಕುಮ್-ರುದ್ರನಿಗೂ, ಪಿರಮ್ಮತನಕ್ಕುಮ್-ಬ್ರಹ್ಮನಿಗೂ, ಪಿಱರ್ಕ್ಕುಮ್-ಇತರ ದೇವತಾದಿಗಳಿಗೂ, ನಾಯಕ‌ರ್-ನಾಯಕನಾದವನು, ಅವನೇ-(ಸರ್ವೇಶ್ವರನಾದ) ಅವನೇ (ಶ್ರೀಮನ್ನಾರಾಯಣನೇ). (ಇದನ್ನೆಲ್ಲಾ) ಕಪಾಲಮ್-(ಬ್ರಹ್ಮನ ಶಿರಸ್ಸನ್ನು ಕತ್ತರಿಸಿ ಪಾತಕಿಯಾದ ರುದ್ರನ ಕೈಯಲ್ಲಿ ಭಿಕ್ಷಾರ್ಥವಾಗಿ ಸಕ್ತವಾದ) ಶಿರಃಕಪಾಲವನ್ನು, ನಲ್ ಮೋಕ್ಕತ್ತು-(ಸಹಸ್ರಧಾಭಿನ್ನವಾಗುವಂತೆ) ಚೆನ್ನಾಗಿ ನಾಶಮಾಡಿದ ಶ್ರೀಮನ್ನಾರಾಯಣನ ಚರಿತ್ರದಲ್ಲಿ (ಮಹಾಭಾರತೇತಿಹಾಸದಲ್ಲಿ), ಕಣ್ಡುಕೊಳ್ಮಿನ್-ನಿರೂಪಿಸಿ ತಿಳಿದುಕೊಳ್ಳಿರಿ. (ಹೀಗಿರುವಲ್ಲಿ) ತೇಶಮ್ ಮಾಮದಿಳ್‌ಶೂಳ್ನ್ದು-ತೇಜೋಮಯವಾಗಿ ಅತ್ಯುನ್ನತವಾದ ಪ್ರಾಕಾರಗಳಿಂದ ಪರಿವೃತವಾಗಿ, ಅಳಕಾಯ - ರಮಣೀಯವಾದ, ತಿರುಕ್ಕುರುಕೂರದನುಳ್-ಶ್ರೀಕುರುಕಾಪುರಿಯಲ್ಲಿ ಸ್ವಾಮಿಯಾಗಿ ಇರುವ, ಈಶಱಪಾಲ್-ಸರ್ವೇಶ್ವರನ ವಿಷಯದಲ್ಲಿ, ಓರ್ ಅವಮ್-ಒಂದು ನ್ಯೂನತೆಯನ್ನೂ, ಕತ್ತುದಲ್-ಭಾವಿಸುವ, ಇಲಿಙ್ಗಿಯರ್ಕ್ಕು-ಲೈಂಗ ಮತಸ್ಥರಿಗೆ, ಎನ್ನಾವದು-ಏನು ಲಾಭವುಂಟಾಗುವುದು?

( ಸ-ಗಾ-ರ || )—

**ಖ್ಯಾತಸ್ಯಾಪಿ ಶಿವಸ್ಯ ತಸ್ಯ ಚ ವಿಧೇರನ್ಯಾತ್ಮನಾಂ ಚಾಪ್ಯಹೋ !**
**ನಾಥೋಽಸೌ ಹಿ ಕಪಾಲಮೋಕ್ಷಚರಿತೇ ದೃಶ್ಯಂ ಕಿಲೈತತ್ತು ವಃ |**
**ತೇಜೋಧಾಮ್ನಿ ಚ ರಮ್ಯವಪ್ರಕುರುಕಾಪುರ್ಯಾಂ ಚಕಾಸ್ತೀಶ್ವರ-**
**ಸ್ತಸ್ಮಿನ್ ದೋಷಲವಬ್ರುವಾಮಪಿ ಫಲಂ ಕಿಂ ವಾಽಸ್ತ್ಯಹೋ! ಲಿಂಗಿನಾಮ್?**

ತಾ॥ ಈಶ್ವರನೆಂದು ಪ್ರಸಿದ್ಧನಾದ ರುದ್ರನಿಗೂ ಅವನಿಗೆ ತಂದೆಯಾದ ಬ್ರಹ್ಮನಿಗೂ ಇತರ ದೇವತಾದಿಗಳಿಗೂ ನಾಥನಾದವನು ಶ್ರೀಮನ್ನಾರಾಯಣನೇ. ಈ ವಿಷಯವನ್ನು ನೀವು ಬ್ರಹ್ಮಕಪಾಲಮೋಕ್ಷದ ಉಪಾಖ್ಯಾನದಿಂದ ತಿಳಿಯಿರಿ. ದಿವ್ಯ ತೇಜೋಮಯ ಪ್ರಾಕಾರಾವೃತವಾದ ಶ್ರೀ ಕುರುಕಾಪುರಿಗೆ ಸ್ವಾಮಿಯಾದ ಸರ್ವೇಶ್ವರನ ವಿಷಯದಲ್ಲೂ ಏನೋ ಒಂದು ನ್ಯೂನತೆಯನ್ನು ಭಾವಿಸುವ ಲೈಂಗ ಮತಸ್ಥರಿಗೆ ಅನ್ತಹ ದೋಷಾರೋಪಣದಿಂದ ಏನು ಲಾಭವುಂಟಾಗುವುದು? (ಅವರಿಗೆ ಅದರಿಂದ ಅನರ್ಥಪ್ರಾಪ್ತಿಯೇ ಆಗುವುದೆಂದು ಭಾವವು.) ಅನ್ತಹ ನಿರರ್ಥಕವಾದ ಕೆಲಸವನ್ನು ಅವರು ಬಿಟ್ಟು ಭಗವದ್ಭಕ್ತರಾಗಿ ಉಜ್ಜೀವಿಸಬೇಕೆಂದು ತಾತ್ಪರ್ಯ

(೫) ಇಲಿಙ್ಗತ್ತಿಟ್ಟ ಪುರಾಣತ್ತೀರುಮ್ ಶಮಣರುಮ್
ಶಾಕ್ಕಿಯರುಮ್,
ವಲಿನ್ದು ವಾದುಶೆಯ್ವೀರ್‌ಕಳುಮ್ ಮಱ್ಱುಮ್
ನುಮ್ ದೆಯ್ವಮುಮಾಕಿ ನಿನ್ಱಾನ್,
ಮಲಿನ್ದು ಶೆನ್ನೆಲ್‌ಕವರಿವೀಶುಮ್
ತಿರುಕ್ಕುರುಕೂರದನುಳ್,
ಪೊಲಿನ್ದು ನಿನ್ಱಪಿರಾನ್ ಕಣ್ಡೀರೊನ್ಱುಮ್ ಪೊಯ್ಯಿಲ್ಲೈ
ಪೋಱ್ಱುಮಿನೇ.

ಪ್ರ|| ಇಲಿಙ್ಗತ್ತು ಇಟ್ಟ-ಲಿಂಗಪೂಜೆಯನ್ನೇ ಮುಖ್ಯವಾಗಿ ಹೇಳುವ, ಪುರಾಣತ್ತೀರುಮ್-ಲೈಂಗಾದಿತಾಮಸಪುರಾಣನಿಷ್ಠರಾದ ನೀವುಗಳೂ, ಶಮಣರುಮ್-(ಬಾಹ್ಯಸ್ಮೃತಿನಿಷ್ಠರಾದ) ಶ್ರಮಣರೂ, ಶಾಕ್ಕಿಯರುಮ್-ಬೌದ್ಧರೂ, ವಲಿನ್ದು-ಶುಷ್ಕತರ್ಕಗಳಿಂದ, ವಾದುಶೆಯ್ವೀರ್‌ಕಳುಮ್-ವಾದಿಸುವ (ವೈಶೇಷಿಕಾದಿಮತಸ್ಥರಾದ) ನೀವುಗಳೂ, ಮಱ್ಱುಮ್-ಬೇರೆ, ನುಮ್‌ದೆಯ್ವಮುಮ್ - ನಿಮ್ಮನಿಮ್ಮ ದೇವತೆಗಳೂ, ಆಕಿನಿನ್ಱಾನ್-ಎಲ್ಲವೂ ತನಗೇ ಸ್ವಾಧೀನವಾಗುವಂತೆ ನಿಂತಿರುವವನು, ಶೆನ್ನೆಲ್‌ಮಲಿನ್ದು-ಕೆಂಪುಬತ್ತವು ತುಂಬಾಬೆಳೆದು, ಕವರಿವೀಶುಮ್-(ತೆನೆಗಳಿಂದ) ಚಾಮರದಂತೆ ಬೀಸುತ್ತಿರುವ, ತಿರುಕ್ಕುರುಕೂರದನುಳ್-ಶ್ರೀ ಕುರುಕಾಪುರಿಯಲ್ಲಿ, ಪೊಲಿನ್ದುನಿನ್ಱಪಿರಾನ್-(ಪರತ್ವ ಸೌಲಭ್ಯಾದಿ ಸಕಲಗುಣ) ಪರಿಪೂರ್ಣನಾಗಿ ನಿಂತಿರುವ ಸ್ವಾಮಿಯೇ ಎಂದು, ಕಣ್ಡೀರ್ - ತಿಳಿದುಕೊಳ್ಳಿರಿ. (ಈ ವಿಷಯದಲ್ಲಿ) ಒನ್ಱುಮ್ ಪೊಯ್ ಇಲ್ಲೈ-ಒಂದೂ ಸುಳ್ಳಲ್ಲ. (ಆದುದರಿಂದ) ಪೋಱ್ಱುಮಿನೇ-ಅವನನ್ನೇ) ಸ್ತೋತ್ರಮಾಡಿರಿ.

(ಸ-ಗಾ-ರ || )—

ಲೈಂಗಾಶ್ಚಾಪಿ ಪುರಾಣವಾದಿನ ಇಮೇ ಯೂಯಂ ಚ ತೇ ಶ್ರಾಮಣಾ-
ಶ್ಶಾಕ್ಯಾದ್ಯಾಸ್ಸಹಸಾ ಚ ವಾದನಿರತಾ ಯಾ ದೇವತಾಸ್ತಾಶ್ಚ ವಃ |
ಸರ್ವಾತ್ಮಾಽಪಿ ಸ ಏವ ವಿಶ್ವವಪುಷಾಽಸ್ತ್ಯುದ್ಧ್ವೀಹಿಕೇದಾರತೋ
ದವ್ಯೇಽಸ್ಮಿನ್ ಕುರುಕಾಪುರೇ ಗುಣನಿಧಿರ್ಮಿಥ್ಯಾ ನ ಹಿ! ಸ್ತೂಯತಾಮ್ ||

ತಾ|| ಲೈಂಗಾದಿಪುರಾಣವಾದಿಗಳೂ ಶ್ರಮಣರೂ ಶಾಕ್ಯರೂ ವೈಶೇಷಿಕಾದಿ ಮತಸ್ಥರೂ ಆದ ನೀವುಗಳೂ ಮತ್ತು ನೀವು ಪೂಜಿಸುವ ದೇವತೆಗಳೂ—ಎಲ್ಲಾ ತನಗೇ ವಶವಾಗುವಂತೆ ಮಾಡಿಕೊಂಡು ನಿಂತಿರುವವನು ಬಹುವ್ರೀಹಿಸಸ್ಯಾದಿ ಭರಿತವಾದ ಶ್ರೀ ಕುರುಕಾಪುರಿಯ ಪೊಲಿನ್ದ್ನಿನ್ಪಿರ್ರಾ—ಸ್ವಾಮಿಯೇ ಎಂದು ತಿಳಿಯಿರಿ. ಇದರಲ್ಲಿ ಯಾವ ಸಂಶಯವೂ ಇಲ್ಲ (ಇದು ಸುಳ್ಳಲ್ಲ) ನೀವುಗಳೆಲ್ಲರೂ ಅವನನ್ನೇ ಸ್ತುತಿಸಿರಿ.

(೬) ಪೋಱ್ಱಿ ಮಱ್ಱೋರ್ ದೆಯ್ವಮ್ ಪೇಣ
ಪ್ಪುಱತ್ತಿಟ್ಟುಮ್ಮೈಯಿನ್ನೇ,
ಶೇಱ್ಱು ವೈತ್ತದೆಲ್ಲೀರುಮ್
ವೀಡುಪೆಱ್ಱಾಲುಲಕಿಲ್ಲೈಯೆನ್ಱೇ,
ಶೇಱ್ಱಿಲ್ ಶೆನ್ನೆಲ್ ಕಮಲಮೋಙ್ಗುಮ್
ತಿರುಕ್ಕುರುಕೂರದನುಳ್,
ಆಱ್ಱವಲ್ಲವನ್ ಮಾಯಮ್ ಕಣ್ಡೀರದಱಿನ್ದಱಿನ್ದೋಡುಮಿನೇ.

ಪ್ರ|| ಮಱ್ಱು ಓರ್—ಬೇರೆ ಒಂದು, ದೆಯ್ವಮ್ – ದೈವವನ್ನು, ಪೋಱ್ಱಿ— ಸ್ತೋತ್ರಮಾಡಿ, ಪೇಣ - ಆದರಿಸುವಂತೆ, ಪುಱತ್ತಿಟ್ಟು—ಹೊರಗೆ ಇಟ್ಟು, ಉಮ್ಮೈ— ನಿಮ್ಮನ್ನು, ಇನ್ನೇ – ಈ ಪ್ರಕಾರವೇ, ಶೇಱ್ಱು ವೈತ್ತದು – (ಇತರ ದೇವತಾ ವಿಷಯದಲ್ಲಿ) ವಿಶ್ವಾಸಪರರಾಗುವಂತೆ ಮಾಡಿ ಇಟ್ಟು ಇರೋಣವು, ಎಲ್ಲೀರುಮ್ ವೀಡು ಪೆಱ್ಱಾಲ್ – ಎಲ್ಲರೂ ಮೋಕ್ಷವನ್ನು ಹೊಂದಿದರೆ, ಉಲಕು – ಲೋಕ ಮರ್ಯಾದೆಯು, ಇಲ್ಲೈ – ಇಲ್ಲದೆ ಹೋಗುವುದು, ಎನ್ಱೇ—ಎಂದೇ. (ಇದೆಲ್ಲಾ) ಶೇಱ್ಱಿಲ್ – ಕೆಸರುಭೂಮಿಯಲ್ಲಿ, ಶೆನ್ನೆಲ್ ಕಮಲಮ್ ಓಙ್ಗು – ಕೆಂಪುನೆಲ್ಲೂ ಕಮಲವೂ ತುಂಬಾ ಬೆಳೆಯುವ, ತಿರುಕ್ಕುರುಕೂರದನುಳ್—ಶ್ರೀಕುರುಕಾಪುರಿಯಲ್ಲಿ ರುವ, ಆಱ್ಱವಲ್ಲವನ್—ಶಕ್ತನಾಗಿ ಕರ್ಮಫಲವನ್ನು ಕೊಡಬಲ್ಲವನಾದ ಸ್ವಾಮಿಯು, ಮಾಯಮ್ ಕಣ್ಡೀರ್—ಮಾಯೆಯೇ ಎಂದು ತಿಳಿಯಿರಿ. ಅದು-ಅದನ್ನು, ಅಱಿನ್ದು ಅಱಿನ್ದು—ತಿಳಿದುತಿಳಿದು, ಓಡುಮಿನ್—(ಆ ಮಾಯೆಯನ್ನು ದಾಟುವುದಕ್ಕಾಗಿ) ಓಡಿರಿ.

( ಸ–ಗಾ–ರ || )—

ಸ್ತುತ್ವಾಽನ್ಯಾಮಪಿ ದೇವತಾನ್ತು ಭಜತೋ ಯುಷ್ಮಾನ್ ಬಹಿಷ್ಕೃತ್ಯ ಯ
ಸ್ತ್ವೇವಂ ತತ್ರ ಚ ಭಕ್ತಿಯುಕ್ತಹೃದಯಾನ್ ಕುರ್ಯಾದಿದಂ ಮಾಯಯಾ|
ಮುಕ್ತಿಶ್ಚೇತ್ತು ಭವಾದೃಶಾಂ ಜಗದಹೋ! ಶಾಸ್ತ್ರಾತಿಗಂ ಸ್ಯಾದಿತಿ
ವ್ರೀಹ್ಯಬ್ಜೈಃ ಕುರುಕಾಪುರೇಽತಿಭರಿತೇ ಭಾತ್ಯೇಷ ಹಿ! ತ್ವರ್ಯತಾಮ್ ||

ತಾ॥ ದೇವತಾನ್ತರವನ್ನು ಭಜಿಸಿ ಆದರಿಸುವಂತೆ ನಿಮ್ಮನ್ನೆಲ್ಲಾ ಹೊರಗೆ ಇಟ್ಟಿರೋಣವು ಏತಕ್ಕೆಂದರೆ—ಎಲ್ಲರಿಗೂ ಮೋಕ್ಷವನ್ನು ಕೊಟ್ಟರೆ ಲೋಕಮರ್ಯಾದೆಯು ನಿಲ್ಲಲಾರದು ಎಂದೇ. ಇದೆಲ್ಲಾ ಶ್ರೀಕುರುಕಾಪುರೀಶ್ವರನಾದ ಸ್ವಾಮಿಯ ಮಾಯೆಯೇ—ಎಂದು ತಿಳಿಯಿರಿ. ಹೀಗೆ ತಿಳಿದುಕೊಂಡು ಆ ಮಾಯೆಯನ್ನು ದಾಟುವುದಕ್ಕಾಗಿ ಪಲಾಯನಮಾಡಿ ಅವನನ್ನೇ ಆಶ್ರಯಿಸಿ ಕೃತಾರ್ಥರಾಗಿರಿ.

(೭) ಓಡಿಯೋಡಿ ಪ್ಪಲಪಿಱಪ್ಪುಮ್ ಪಿಱನ್ದು,
ಮಱ್ಱೋರ್ ದೆಯ್ವಮ್
ಪಾಡಿಯಾಡಿ ಪ್ಪಣಿನ್ದು, ಪಲ್‌ಪಡಿಕಾಲ್
ವೞಿಯೇಱಿಕ್ಕಣ್ಡೀರ್,
ಕೂಡಿವಾನವರೇತ್ತನಿನ್ಱ ತಿರುಕ್ಕುರುಕೂರದನುಳ್,
ಆಡುಪುಳ್ಕ್ಕೊಡಿ ಯಾದಿಮೂರ್ತ್ತಿಕ್ಕಡಿಮೈ ಪುಕುವದುವೇ.

ಪ್ರ॥ ಮಱ್ಱು ಓರ್‌ದೆಯ್ವಮ್-ಬೇರೆ ಒಂದು ದೇವತೆಯನ್ನು, ಪಾಡಿಯಾಡಿ-ಹಾಡಿ ನರ್ತನಮಾಡಿ, ಪಣಿನ್ದು—ನಮಸ್ಕರಿಸಿ, ಪಲ್‌ಪಡಿಕಾಲ್—ಅನೇಕ ಪ್ರಕಾರಗಳಿಂದಲೂ, ವೞಿ—ಆಯಾ ತಾಮಸಶಾಸ್ತ್ರಮಾರ್ಗದಿಂದ, ಏಱಿ—ಮೇಲೆ ಮೇಲೆ ಆಶ್ರಯಿಸಿ, ಓಡಿ ಯೋಡಿ-(ಗರ್ಭನರಕಾದಿಗಳಲ್ಲಿ) ಪ್ರವೇಶಿಸಿ, ಪಲಪಿಱಪ್ಪುಮ್ ಪಿಱನ್ದು—ಅನೇಕವಿಧ ಜನ್ಮಗಳಲ್ಲಿ ಹುಟ್ಟಿ, ಕಣ್ಡೀರ್ — ನೀವುಗಳು ಸಾಕ್ಷಾತ್ತಾಗಿ ಅನುಭವಿಸಿದಿರಷ್ಟೆ. (ಆದುದರಿಂದ) ವಾನವರ್—ದೇವತೆಗಳೆಲ್ಲರೂ, ಕೂಡಿ-ಸೇರಿ, ಏತ್ತ-ಆಶ್ರಯಿಸಿ ಸ್ತೋತ್ರಮಾಡುವಂತೆ, ತಿರುಕ್ಕುರುಕೂರದನುಳ್—ಶ್ರೀಕುರುಕಾಪುರಿಯಲ್ಲಿ, ನಿನ್ಱ-ನಿಂತ, ಆಡುಪುಳ್‌ಕೊಡಿ - (ಭಗವದನುಭವದಿಂದ) ಆಡುವ ಗರುಡನನ್ನು ಧ್ವಜವಾಗಿ ಉಳ್ಳ, ಆದಿಮೂರ್ತ್ತಿಕ್ಕು — ಸರ್ವಕಾರಣಭೂತನಾದ ಸ್ವಾಮಿಗೆ, ಅಡಿಮೈಪುಕುವದು — ಕೈಂಕರ್ಯವನ್ನು ಮಾಡುವುದಕ್ಕಾಗಿ ನೀವು ಪ್ರವೇಶಿಸಿರಿ.

(ಸ-ಗಾ-ರ ॥)—

ಧಾವನ್ತೋಽಪಿ ಚ ಭೂಯ ಏವ ಬಹುಧಾ ನಾನಾಜನೀಃ ಪ್ರಾಪ್ಯ ಚಾ-
ಪ್ಯಾಶ್ರಿತ್ಯೇತರದೈವತಂ ಚ ವಿವಿಧೈರ್ಗಾನೈಶ್ಚ ನೃತ್ತಾದಿಭಿಃ ।
ಯೂಯಂ ಪ್ರಾಪ್ತಫಲಾಃ ಕಿಲಾದ್ಯ ಸುರಬೃನ್ದೇಡ್ಯಸ್ಯ ತಾರ್ಕ್ಷ್ಯೇಶಿತು-
ಶ್ರೀವಿಷ್ಣೋಃ ಕುರುಕಾಪುರೇಽತ್ರ ಭಜನಂ ಸ್ಯಾದಾದಿಮೂರ್ತೇರ್ವರಮ್॥

ತಾ|| ನೀವುಗಳೆಲ್ಲಾ ದೇವತಾನ್ತರವನ್ನು ಹಾಡಿ ಕೀರ್ತನಮಾಡಿ ನಮಸ್ಕರಿಸಿ ಅನೇಕ ಪ್ರಕಾರಗಳಿಂದ ಭಜಿಸಿ, ಗರ್ಭನರಕಾದಿಗಳಲ್ಲಿ ಪ್ರವೇಶಿಸಿ ಅನೇಕಜನ್ಮಗಳಲ್ಲಿ ಹುಟ್ಟಿ ಎಲ್ಲವನ್ನೂ ಅನುಭವಿಸಿ ಕಂಡಿರುತ್ತೀರಷ್ಟೆ— ಈಗಲಾದರೂ (ಆಷ್ಟುದು ಮಾರ್ಗವನ್ನು ಬಿಟ್ಟು), ನೀವುಗಳು ಸರ್ವ ದೇವತೆಗಳಿಂದಲೂ ಸೇವ್ಯನಾದ ಶ್ರೀ ಕುರುಕಾಪುರೀಶ್ವರನಾದ ಆದಿಮೂರ್ತಿಗೇ ಕೈಂಕರ್ಯವನ್ನು ಮಾಡುವುದಕ್ಕಾಗಿ ಸನ್ನದ್ಧರಾಗಿರಿ.

(೮) ಪುಕ್ಕಡಿಮೈಯಿನಾಲ್ ತನ್ನೈಕ್ಕಣ್ಡ ಮಾರ್ಕಣ್ಡೇಯನವನೈ,
ನಕ್ಕಪಿರಾನುಮನ್ರುಯ್ಯಕ್ಕೊಣ್ಡದು ನಾರಾಯಣನರುಳೇ,
ಕೊಕ್ಕಲರ್ತಡಮ್ ತಾಳೈವೇಲಿ ತ್ತಿರುಕ್ಕುರುಕೂರದನುಳ್,
ಮಿಕ್ಕವಾದಿಪ್ಪಿರಾನ್ ನಿಱ್ಕ ಮಱ್ಱೈತ್ತೆಯ್ವಮ್
ವಿಳಮ್ಬುದಿರೇ.

ಪ್ರ|| ಅಡಿಮೈಯಿನಾಲ್-ಶೇಷವೃತ್ತಿಯಿಂದ (ದಾಸ್ಯದಿಂದ), ಪುಕ್ಕು-ಒಳಗೆ ಪ್ರವೇಶಿಸಿ, ತನ್ನೈ-ತನ್ನನ್ನು, ಕಂಡ-ಸಾಕ್ಷಾತ್ಕರಿಸಿದ, ಮಾರ್ಕಣ್ಡೇಯನ್ ಅವನೈ-ಮಾರ್ಕಂಡೇಯನೆಂದು ಪ್ರಸಿದ್ಧನಾದವನನ್ನು, ನಕ್ಕಪಿರಾನುಮ್-ದಿಗಮ್ಬರನಾದ ರುದ್ರನೂ, ಅನ್ರು-ಆ ಪ್ರಳಯದಶೆಯಲ್ಲಿ, ಉಯ್ಯಕ್ಕೊಣ್ಡದು - ಉಜ್ಜೀವಿಸುವಂತೆ ಮಾಡಿದುದು, ನಾರಾಯಣನ್ ಅರುಳೇ, ಶ್ರೀಮನ್ನಾರಾಯಣನ ಕೃಪೆಯೇ ; (ಆದುದರಿಂದ) ಕೊಕ್ಕು ಅಲರ್-ಕೊಕ್ಕರೆಯಂತೆ ಅಲರುವ ಹೂವುಗಳುಳ್ಳ, ತಡಮ್ ತಾಳೈವೇಲಿ-ವಿಶಾಲವಾದ ತಾಳೇಬೇಲಿಗಳೊಡನೆ ಕೂಡಿದ, ತಿರುಕ್ಕುರುಕೂರದನುಳ್-ಶ್ರೀ ಕುರುಕಾಪುರಿಯಲ್ಲಿ, ಮಿಕ್ಕ-ಸರ್ವಾಧಿಕನಾದ, ಆದಿಪ್ಪಿರಾನ್-ಆದಿನಾಥ ಸ್ವಾಮಿಯು, ನಿಱ್ಕ-ನಿಂತಿರುವಲ್ಲಿ, ಎ ಮಱ್ಱು ತೆಯ್ವಮ್ - ಬೇರೆ ಯಾವ ದೈವವನ್ನು, ವಿಳಮ್ಬುದಿರ್-ಸ್ತುತಿಸುವಿರಿ ? (ಇನ್ನು ಯಾವುದನ್ನು ದೈವವೆಂದು ನೀವು ಭ್ರಾನ್ತರಾಗಿ ಹೇಳುವಿರಿ ?)

( ಸ-ಗಾ-ರ || )—

ದಾಸ್ಯಾತ್ತಂ ಶಿವಮಾಶ್ರಿತಃ ಕಿಲ ಮುನಿರ್ಯೋಽಸೌ ಮೃಕಣ್ಡಾತ್ಮಜ-
ಸ್ತೇನಾಭೂತ್ಪರಿರಕ್ಷಿತಶ್ಚ ತದಿದಂ ನಾರಾಯಣಾನುಗ್ರಹಾತ್ |
ಫುಲ್ಲೋತ್ಫುಲ್ಲಸುಗನ್ಧಸೂನವಿಲಸತ್ಸತ್ಕೇತಕೀಭೂಷಿತೇ
ಭಾತಿ ಶ್ರೀಕುರುಕಾಪುರೇ ಪ್ರಭುರಸಾವಾದ್ಯಃ! ಕಿಮನ್ಯೈಸ್ಸುರೈಃ? ||

ತಾ|| ದಿಗಮ್ಬರನಾದ ರುದ್ರನನ್ನು ಮಾರ್ಕಂಡೇಯನು ದಾಸ್ಯವೃತ್ತಿಯಿಂದ ಆಶ್ರಯಿಸಿದಾಗ ಆ ಕಾಲದಲ್ಲಿ ಅವನಿಗೆ ರಕ್ಷಕವಾದುದು ಶ್ರೀಮನ್ನಾರಾಯಣನ ಕೃಪೆಯೇ ಹೊರತು ಬೇರೆಯಾವುದೂ ಅಲ್ಲ. (ಆ ರುದ್ರನಿಗೆ ರಕ್ಷಣಶಕ್ತಿಯು ಇಲ್ಲದೆ ಹೋಯಿತಷ್ಟೆ.). ಆದುದರಿಂದ ದಿವ್ಯಕೇತಕೀ ಪುಷ್ಪಾಲಂಕೃತವಾದ ಶ್ರೀ ಕುರುಕಾಪುರಿಗೆ ನಾಥನಾದ ಆದಿಮೂರ್ತಿಯನ್ನು ಹೊರತು ಬೇರೆ ಯಾವುದನ್ನೂ ದೈವವೆಂದು ನೀವು ಸ್ತುತಿಸಬೇಡಿರಿ.

(೯) ವಿಳಮ್ಬುಮಾಱುಶಮಯುಮುಮವೈಯಾಕಿಯುಮ್
ಮಱ್ಱುಮ್ ತನ್ಪಾಲ್,
ಅಳನ್ದು ಕಾಣ್ಡಱ್ಕರಿಯನಾಕಿಯ ಆದಿಪ್ಪಿರಾನಮರುಮ್,
ವಳಙ್ಕೊಳ್ ತಣ್ಪಣೈಶೂೞ್ನ್ದಱ್ಕಾಯ
ತಿರುಕ್ಕುರುಕೂರದನೈ,
ಉಳಙ್ಕೊಳ್ ಞಾನತ್ತು ವೈಮ್ಮಿನುಮ್ಮೈಯುಯ್ಯ
ಕ್ಕೊಣ್ಡು ಪೋಕುಱಿಲೇ.

ಪ್ರ|| ವಿಳಮ್ಬುಮ್-ಶಬ್ದಾಡಂಬರ ಮಾತ್ರವುಳ್ಳ, ಆಱುಶಮಯುಮುಮ್-ಬಾಹ್ಯಷಣ್ಮತಗಳೂ (ಚಾರ್ವಾಕ-ಶಾಕ್ಯ-ಕ್ಷಪಣಕ-ವೈಶೇಷಿಕ-ಸಾಂಖ್ಯ-ಪಾಶುಪತ ಮತಗಳೂ), ಮಱ್ಱುಮ್ – ಮತ್ತೂ ಅನೇಕ ಕುದೃಷ್ಟಿಮತಗಳೂ, ಅವೈಯಾಕಿಯುಮ್–ಸಭೆಗಳಾಗಿ ಸೇರಿದರೂ, ತನ್ಪಾಲ್ – ಅಪರಿಚ್ಛಿನ್ನ ಸ್ವಭಾವನಾದ ತನ್ನ ವಿಷಯದಲ್ಲಿ, ಅಳನ್ದು-ಪರಿಚ್ಛೇದಿಸಿ, ಕಾಣ್ಡಱ್ಕು-ಕಾಣುವುದಕ್ಕೆ, ಅರಿಯನಾಕಿಯ-ಅಶಕ್ಯನಾದ, ಆದಿಪ್ಪಿರಾನ್-ಆದಿನಾಥನು (ಸರ್ವಕಾರಣಭೂತನಾದ ಸ್ವಾಮಿಯು), ಅಮರುಮ್-ಆದರದೊಡನೆ ವಾಸಮಾಡುವ ಸ್ಥಾನವಾದ, ವಳಮ್ಕೊಳ್ – ದರ್ಶನೀಯವಾಗಿ, ತಣ್–ಶ್ರಮಹರವಾಗಿರುವ, ಪಣೈ – ಜಲಕ್ಷೇತ್ರಗಳಿಂದ, ಶೂೞ್ನ್ದು-ಪರಿವೃತವಾಗಿ, ಅಱ್ಕಾಯ–ಸಿರತಿಶಯ ಭೋಗ್ಯವಾದ, ತಿರುಕ್ಕುರುಕೂರದನೈ-ಶ್ರೀ ಕುರುಕಾಪುರಿಯನ್ನು, (ನೀವುಗಳು) ಉಮ್ಮೈ-ನಿಮ್ಮನ್ನು, ಉಯ್ಯಕ್ಕೊಣ್ಡು-ಉಜ್ಜೀವಿಸುವಂತೆ ಮಾಡಿಕೊಂಡು, ಪೋಕುಱಿಲ್ – ನಡೆಯಬೇಕಾಗಿದ್ದಲ್ಲಿ, ಉಳಮ್-ಕೊಳ್ಞಾನತ್ತು (ಳ್)-ನಿಮ್ಮ ಮಾನಸಜ್ಞಾನದೊಳಗೆ, ವೈಮ್ಮಿನ್-ಇಡಿರಿ. (ಶ್ರೀ ಕುರುಕಾಪುರಿಯನ್ನೇ ಅನವರತ ಸ್ಮರಿಸಿರಿ.)

( ಸ–ಗಾ–ರ || )—

ಶಬ್ದಾಡಮ್ಬರಷಣ್ಮತಾದಿಸಮುದ್ಯೈರ್ದುಷ್ಟೈಃ ಕುದೃಷ್ಟ್ಯಾದಿಭಿ-
ಶ್ಶಕ್ಯೋ ನೈವ ಹಿ ಮಾತುಮಸ್ತಿ ಚ ಹರಿರ್ಯಸ್ತ್ವಾದಿನಾಥಾಹ್ವಯಃ |
ತಸ್ಯೇದಂ ಶುಭಸನ್ನಿಧಾನಮತುಲಂ ಶೀತಾಮ್ಬುಧಾರಾವೃತಂ
ರಮ್ಯಂ ಶ್ರೀಕುರುಕಾಪುರಂ ಹೃದಿ ಸದಾ ಧ್ಯೇಯಂ ಹಿ ಮೋಕ್ಷಾರ್ಥಿಭಿಃ||

ತಾ (ಶಬ್ದಾಡಂಬರ-ಶುಷ್ಕತರ್ಕಾದಿ – ಬಹುಳವಾದ) ಬಾಹ್ಯಷಣ್ಮತಗಳೂ ಕುದೃಷ್ಟಿವರ್ಗಗಳೂ ಎಲ್ಲಾ ಸಭೆಸೇರಿ ಭಗವನ್ತನನ್ನು ಪರಿಚ್ಛೇದಿಸಿ ತಿಳಿಯಲು ಪ್ರಯತ್ನಪಟ್ಟಾಗ್ಯೂ ಅವನು ಜ್ಞಾನಗೋಚರನಾಗುವುದಿಲ್ಲ. ಅನ್ತಹ ಸರ್ವ ಜಗತ್ಕಾರಣಭೂತನಾದ ಆದಿನಾಥನ ವಾಸಸ್ಥಾನವಾದ (ರಮಣೀಯವಾದ) ಶ್ರೀ ಕುರುಕಾಪುರಿಯನ್ನು ನಿಮ್ಮ ಮನಸ್ಸಿನಲ್ಲಿ ಯಾವಾಗಲೂ ಚಿನ್ತಿಸಿ ನೀವುಗಳು ಉಜ್ಜೀವಿಸಿರಿ.

(೧೦) ಉಱುವದಾವದೆತ್ತೇವುಮೆವ್ವುಲಕಙ್ಗಳುಮ್ ಮಱ್ಱುಮ್
ತನ್ಪಾಲ್,
ಮಱುವಿಲ್ ಮೂರ್ತ್ತಿಯೋಡೊತ್ತಿತ್ತನೈಯುಮ್
ನಿನ್ಱವಣ್ಣಮ್ ನಿಱ್ಕವೇ,
ಶೆಱುವಿಲ್ ಚ್ಚೆನ್ನೆಲ್ ಕರುವ್ವೊಡೋಙ್ಗು
ತಿರುಕ್ಕುರುಕೂರದನುಳ್,
ಕುಱಿಯ ಮಾಣುರುವಾಕಿಯ ನೀಳ್
ಕುಡಕ್ಕೂತ್ತನುಕ್ಕಾಳ್ಚ್ಚೆಯ್ವದೇ.

ಪ್ರ|| ಎತ್ತೇವುಮ್–ಸಕಲದೇವತಾವರ್ಗವೂ, ಎವ್ವುಲಕಙ್ಗಳುಮ್–ಸಮಸ್ತ ಲೋಕಗಳೂ, ಮಱ್ಱುಮ್–ಮತ್ತೂ ಸಕಲಚಿದಚಿದ್ವರ್ಗಗಳೂ, ಇತ್ತನೈಯುಮ್– ಇವುಗಳೆಷ್ಟೊ, ತನ್ಪಾಲ್–ತನ್ನ ಸ್ವರೂಪದೊಳಗೆ, ಮಱುಇಲ್–ನಿರ್ದೋಷವಾದ, ಮೂರ್ತ್ತಿಯೋಡೊತ್ತು–ದಿವ್ಯಮಂಗಳ ವಿಗ್ರಹದಂತೆ ಅವನಿಗೆ ಅತಿಶಯಕರವಾಗಿ, ನಿನ್ಱವಣ್ಣಮ್–ಅವನ ಸ್ವರೂಪದಲ್ಲಿ ವ್ಯತ್ಯಾಸವಾಗದಂತೆ, ನಿಱ್ಕವೇ–ನಿಂತಿರುವಲ್ಲಿ, (ಅಂತಹ ಮಹತ್ತ್ವಕ್ಕೆ ತಕ್ಕಂತೆ) ಶೆಱುವಿಲ್–ಕ್ಷೇತ್ರಗಳಲ್ಲಿ, ಶೆನ್ನೆಲ್–ಕೆಂಪುಬತ್ತ, ಕರುವ್ವೊಡು–ಕಬ್ಬು ಸಹಿತ, ಓಙ್ಗು–ಇವುಗಳೆಲ್ಲಾ ಚೆನ್ನಾಗಿ ಬೆಳೆಯುವ, ತಿರುಕ್ಕುರುಕೂದನುಳ್–ಶ್ರೀ ಕುರುಕಾಪುರಿಯಲ್ಲಿ, ಕುಱಿಯ–ವಾಮನನಾಗಿ, ಮಾಣುರುವಾಕಿಯ–

ಬ್ರಹ್ಮಚಾರಿ ರೂಪವುಳ್ಳ, ನೀಳ್ – ನಿರತಿಶಯಭೋಗ್ಯವಾದ, ಕುಡಕ್ಕೂತ್ತನುಕ್ಕು– ಕುಂಭಲೀಲಾಪರನಾದ ಕೃಷ್ಣನಿಗೆ, ಆಳ್ ಶೆಯ್ವದೇ – ಕೈಂಕರ್ಯಮಾಡೋಣವೇ, ಉಱುವದು ಅವದು–ಶ್ರೇಷ್ಠವಾಗಿಯೂ ಉಚಿತವಾಗಿಯೂ ಇರುವ ಪುರುಷಾರ್ಥವು.

( ಸ–ಗಾ–ರ || )—

**ದೇವಾಸ್ತೇಽಪ್ಯಖಿಲಾಸ್ಸಮಸ್ತಭುವನಾನ್ಯನ್ಯಾನಿ ಚಾಸ್ಯ ಪ್ರಭೋ–**
**ರ್ದಿವ್ಯಾ ಮೂರ್ತಿರಿತಿ ಪ್ರಸಿದ್ಧವಿಭವೈರ್ಭಾತಿ ಸ್ವಯಂ ಸೇವ್ಯತಾಮ್ |**
**ಸೋಽಯಂ ಶ್ರೀಕುರುಕಾಪುರೇ ಸುರುಚಿರೈರ್ವ್ರೀಹೀಕ್ಷುಕಾಣ್ಡೈರಪಿ**
**ಕ್ಷೇತ್ರೈರೇವ ಲಸತ್ಯಹೋ ! ವಟುತನುರ್ಯಃ ಕುಮ್ಭಲೀಲಾಶ್ರಯಃ ||**

ತಾ|| ಸಕಲ ದೇವತಾವರ್ಗವೂ ಸಮಸ್ತ ಲೋಕಗಳೂ ಸಕಲ ಚಿದಚಿದ್ವರ್ಗ ಗಳೂ ಅವನ ಸ್ವರೂಪದೊಳಗೆ ನಿರ್ದೋಷವಾದ ದಿವ್ಯಮಂಗಳ ವಿಗ್ರಹದಂತೆ ಸೇರಿ ಕೊಂಡು ಸ್ವರೂಪವ್ಯತ್ಯಯವಿಲ್ಲದಂತೆ ನಿಂತಿರುವಲ್ಲಿ, ಅಂತಹ ಮಹತ್ತ್ವಕ್ಕೆ ಅನು ಗುಣವಾಗಿ ಇಕ್ಷುವ್ರೀಹಿಸಮೃದ್ಧಿಯುಳ್ಳ ಶ್ರೀ ಕುರುಕಾಪುರಿಯಲ್ಲಿ ನಿಂತಿರುವ ವಾಮನ ಬ್ರಹ್ಮಚಾರಿಯಾದ ಕುಂಭಲೀಲಾ ರಸಿಕನಿಗೆ (ಶ್ರೀ ಕೃಷ್ಣನಿಗೆ) ಕೈಂಕರ್ಯ ಮಾಡೋ ಣವೇ ಶ್ರೇಷ್ಠವಾದ ಮತ್ತು ಉಚಿತವಾದ ಪುರುಷಾರ್ಥವು.

(೧೧) ಆಳ್ಚ್ಚೆಯ್ದಾಳಿಪ್ಪಿರಾನ್ಕೈ ಚ್ಚೇರ್ನ್ದವನ್
ವಣ್ಕುರುಕೂರ್ ನಕರಾನ್,
ನಾಳ್ಕಮೞ್ ಮಕಿೞ್‌ಮಾಲೈ ಮಾರ್ಬಿನನ್ ಮಾಱನ್
ಶಡಕೋಪನ್,
ವೇಳ್ವಿಯಾಲ್ ಚೊನ್ನಪಾಡಲಾಯಿರತ್ತುಳಿಪ್ಪತ್ತುಮ್
ವಲ್ಲಾರ್,
ಮಿಳಾಳ್ಚ್ಚೆಯ್ದಿ ವೈಕುನ್ದಮಾನಕರ್ ಮಱ್ಱದು
ಕೈಯದುವೇ.

ಪ್ರ|| ಆಳ್ಚ್ಚೆಯ್ದು–(ಪರೋಪದೇಶರೂಪವಾದ) ವಾಚಿಕ ಕೈಂಕರ್ಯವನ್ನು ಮಾಡಿ, ಆೞಿಪ್ಪಿರಾನ್ಕೈ–ಚಕ್ರಪಾಣಿಯಾದ ಸ್ವಾಮಿಯನ್ನು, ಶೇರ್ನ್ದವನ್–ಆಶ್ರಯಿಸಿ ದವರಾದ, ವಣ್ ಕುರುಕೂರ್ ನಕರಾನ್ – ಶ್ರೀ ಕುರುಕಾಪುರೀನಿರ್ವಾಹಕರಾಗಿ, ನಾಳ್ಕಮೞ್–ಅಭಿನವ ಪರಿಮಳಭರಿತವಾದ, ಮಕಿೞ್‌ಮಾಲೈ – ವಕುಳಮಾಲಿಕೆ

ಯನ್ನು, ಮಾರ್ಬಿನ್ನ-ವಕ್ಷಸ್ಸ್ಥಲದಲ್ಲಿಯುಳ್ಳ, ಮಾರ್ರ್ ಶಡಕೋಪನ್-ಮಾರನೆಂಬ ನಾಮಧೇಯವುಳ್ಳ ಶ್ರೀ ಶಠಾರಿಮುನಿವರ್ಯರು, ವೇಳ್ಕೈಯಾಲ್-ಅತ್ಯಾದರದಿಂದ, ಶೊನ್ನಪಾಡಲ್-ಹೇಳಿದ (ರಚಿಸಿದ) ಗಾನರೂಪವಾದ, ಆಯಿರತ್ತುಳ್ - ಸಹಸ್ರ ಪದ್ಯಮಾಲೆಯೊಳು, ಇಪ್ಪತ್ತುಮ್-ಈ ದಶಕವನ್ನು, ವಲ್ಲಾರ್-ಬಲ್ಲವರ, ಕೈಯದು-ಹಸ್ತಗತವಾದುದು, ಮಱ್ಱು ಅದು - ಅದಕ್ಕಿಂತಮೇಲೆ, ಮೀಳ್ಚಿಯಿನ್ಱಿ - ಪುನರಾವೃತ್ತಿಯಿಲ್ಲದ, ವೈಕುನ್ದಮಾನಕರೇ-ಶ್ರೀ ವೈಕುಂಠ ಮಹಾನಗರವೇ. (ಪರಮ ಪದವೇ ಅವರಿಗೆ ಹಸ್ತಗತವಾಗುತ್ತವೆ.)

( ಸ-ಗಾ-ರ ॥ )

ಭಾತಿ ಶ್ರೀಕುರುಕಾಪುರೇಽತ್ರ ವಚಸಾ ತಂ ಚಾದಿನಾಥಂ ಭಜನ್
ನಿತ್ಯೋದ್ಯದ್ವಕುಳಾವಳೀಂ ಹೃದಿ ವಹನ್ ಮಾರಶ್ಶಠಾರಿರ್ಮುನಿಃ ।
ಉತ್ಸಾಹಾತ್ಕಿಲ ತತ್ಕೃತೇ ತು ದಶಕಂ ಚೈತತ್ಸಹಸ್ರೇ ವಿದು-
ರ್ಯೇ ತೇಷಾಂ ನ ಪುನರ್ಭವೋಽಸ್ತಿ ! ಪರಮಂ ಹಸ್ತೇಽಸ್ತಿ ದಿವ್ಯಂ ಪದಮ್ ॥

ತಾ॥ ಪರೋಪದೇಶರೂಪವಾದ ವಾಂಚಿಕಕೈಂಕರ್ಯವನ್ನು ಮಾಡಿ, ಶ್ರೀ ಚಕ್ರಪಾಣಿಯಾದ ಸ್ವಾಮಿಯನ್ನು ಆಶ್ರಯಿಸಿದ ಕುರುಕಾಪುರೀಶ್ವರರಾಗಿಯೂ, ಅಭಿನವ ಪರಿಮಳಭರಿತ ವಕುಳಮಾಲಾಧರರಾಗಿಯೂ ಇರುವ ಮಾಱನೆಂಬ ಶ್ರೀ ಶಠಾರಿ ಮುನಿವರ್ಯರು ರಚಿಸಿದ ಗಾನರೂಪವಾದ ಸಹಸ್ರ ಪದ್ಯಮಾಲೆಯೊಳು ಈ ದಶಕವನ್ನು ಬಲ್ಲವರಿಗೆ ಸಾಕ್ಷಾದ್ವೈಕುಂಠಲೋಕವೇ ಹಸ್ತಗತವಾಗುವುದು.

( ದ್ರ-ಉ-ಸಂ ॥ )—

ಬನ್ಧೇ ಸಮೇಽಪಿ ಹರಿಣಾ ನಿಖಿಲಾತ್ಮರಾಶೇಃ
ಸಂಸಾರಹೇತುಮಿತರತ್ರ ಪರತ್ವಬೋಧಮ್ ।
ವೇದೇತಿಹಾಸಮುಖತಃ ಪರಿಹೃತ್ಯ ಶೌರೇ-
ರರ್ಚಾತನೋಸ್ಸ ದಶಮೇ ವ್ಯವೃಣೋತ್ಪರತ್ವಮ್ ॥

( ದ್ರ-ಉ-ತಾ-ರ ॥ )—

ಕಲ್ಪಾನ್ತೇಽಪಿ ಸ್ಥಿತತ್ವಾತ್ ಸಕಲಸುರಗಣಸ್ರಷ್ಟೃಭಾವಾಜ್ಜನಾನಾಂ
ರಕ್ಷಾದ್ಯಾಪಾದಕತ್ವಾಚ್ಛಿವವಿಧಿಭರಣಾತ್ ಸರ್ವದೇವಾತ್ಮಭಾವಾತ್ ।
ತತ್ತತ್ಕರ್ಮಾನುರೂಪಂ ಫಲವಿತರಣತೋ ವೈನತೇಯಧ್ವಜತ್ವಾತ್
ಮಾರ್ಕಣ್ಡೇಯಾವನಾದೇಃ ಪ್ರಭುಮಥ ಶಠಜಿತ್ಪ್ರಾಹ ಸರ್ವಾಮರೋಚ್ಚಮ್ ॥

ನಿತ್ಯೈಶ್ವರ್ಯನ್ತು ತುಲ್ಯೇ ಸಹಜಬಹುಲಸದ್ಭೋಗ್ಯಮನ್ಯೋನ್ಯಸಕ್ತಂ
ಕ್ಲೇಶಾಪಾದಿಸ್ವತುಲ್ಯಂ ಸ್ವಜನಕೃತಕೃತಾರ್ಥೀಕೃತಿಂ ಸ್ನೇಹಿವೈದ್ಯಮ್ ।
ಸಂಯುಕ್ತಂ ಸದ್ಗುಣಾಢ್ಯೈಃ ಸ್ವಜನಪರಿಹೃತೋಪೇಕ್ಷ್ಯಮಿಷ್ಟಾರ್ಥರೂಪಂ
ಶ್ರೇಷ್ಠಂ ನಿಶ್ಶೇಷಭೋಗಾದಮನುತ ಶತಕೇ ದೇವತಾಸಾರ್ವಭೌಮಮ್ ॥

(ಈ ದಶಮದಶಕದ ಸಾರಾಂಶ)—

ಈ ಹತ್ತನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಶ್ರೀ ಕುರುಕಾಪುರೀಶ್ವರನಾದ ಆದಿನಾಥ ಸ್ವಾಮಿಯ ವಿಷಯದಲ್ಲಿ ನಿತ್ಯಕೈಂಕರ್ಯವೇ ಪರಮಪುರುಷಾರ್ಥವೆಂದು ನಿರೂಪಿಸಿ, ದೇವತಾನ್ತರ ಭಜನದೋಷಗಳನ್ನು ವರ್ಣಿಸಿ, ಇತರ ಮತಸ್ಥರನ್ನೆಲ್ಲಾ ಗರ್ಹಣಮಾಡಿ, ಶ್ರೀಮನ್ನಾರಾಯಣನ ಸಕಲಲೋಕ ಸೃಷ್ಟಿಸ್ಥಿತಿಲಯ ಕಾರಣತ್ವಾದಿ ರೂಪವಾದ ಪರಾತ್ಪರತ್ವವನ್ನು ಸ್ಥಾಪಿಸಿ ಇರುತ್ತಾರೆ. ಈ ದಶಕವನ್ನು ಅಭ್ಯಸಿಸಿದವರಿಗೆ ಪರಮ ಪದವು ಹಸ್ತಗತವಾಗಿಯೇ ಇರುವುದೆಂದು ಫಲವನ್ನೂ ಸೂಚಿಸಿ ಇರುತ್ತಾರೆ.

(ಈ ಚತುರ್ಥಶತಕದ ಸಾರಾಂಶ)—

ಈ ಚತುರ್ಥಶತಕದಲ್ಲಿ—(೧) ಐಶ್ವರ್ಯಕೈವಲ್ಯಾದಿ ಪುರುಷಾರ್ಥಗಳ ಅಸ್ಥಿರತ್ವವೂ ಅಲ್ಪತ್ವವೂ (೨) ಶ್ರೀ ಭಗವದವತಾರಗಳಲ್ಲಿ ತತ್ವಾದತುಲಸಿಯ ಅಪೇಕ್ಷೆಯೂ (೩) ಸರ್ವೇನ್ದ್ರಿಯಾದಿ ಸರ್ವಸ್ವ ಸಮರ್ಪಣವೂ (೪) ಸದೃಶವಸ್ತುದರ್ಶನದಿಂದ ಮೋಹವಶ್ಯತೆಯೂ (೫) ಸರ್ವೇಶ್ವರ ಮಂಗಳಾಶಾಸನವೂ (೬) ಕ್ಷುದ್ರದೇವತಾರಾಧನ ನಿಂದನಪೂರ್ವಕವಾದ ಶ್ರೀ ಭಗವತ್ಸಂಕೀರ್ತನಾದಿಗಳ ಪ್ರಾಶಸ್ತ್ಯವೂ (೭) ದಿವ್ಯಮಂಗಳ ವಿಗ್ರಹದರ್ಶನಕಾಂಕ್ಷೆಯೂ (೮) ಸರ್ವೇಶ್ವರನಿಂದ ಆದರಿಸಲ್ಪಡದ ಆತ್ಮಾತ್ಮೀಯಗಳ ತ್ಯಾಜ್ಯತ್ವವೂ (೯) ಶ್ರೀ ಭಗವದ್ವಿಮುಖರ ಸಹವಾಸಕ್ಕಿಂತ ದೇಹತ್ಯಾಗವೇ ಒಳ್ಳೇದೆಂದು ಸ್ವೀಕಾರಪ್ರಾರ್ಥನವೂ (೧೦) ದೇವತಾನ್ತರಪರರನ್ನು ನೋಡಿ ಶ್ರೀಮನ್ನಾರಾಯಣನೇ ಪರಾತ್ಪರನೆಂದು ಉಪದೇಶದ ಪ್ರಕಾರವೂ—ಕ್ರಮೇಣ ಹತ್ತುದಶಕಗಳಲ್ಲಿಯೂ ಶ್ರೀ ಶಠಾರಿಮುನಿವರ್ಯರಿಂದ ವರ್ಣಿಸಲ್ಪಟ್ಟಿವೆ.

**ಈ ಪ್ರಕಾರ ಈ ನಾಲ್ಕನೆಯ ಶತಕದಲ್ಲಿ ಶ್ರೀ ಭಗವಚ್ಚರಣಯುಗಳ ಸಾನ್ನಿಧ್ಯವೇ ಪ್ರಿಯತಮವೆಂದು ಪ್ರತಿಪಾದಿತವಾಗಿದೆ.**



ಶ್ರೀಮದ್ಯಾದವಶೈಲಶೃಂಗರವಿಣಾ ಶ್ರೀಕಲ್ಕಿಸಿಂಹಾತ್ಮನಾ
ಶ್ರೀಮಲ್ಲೋಶ್ವರಕೃಷ್ಣಸನ್ನಿಧಿಜುಷಾ ಕಲ್ಯಾಣಪುರ್ಯಾಮಿಹ ।
ಸರ್ವೇಷಾಂ ಜಗತಾಂ ತಮಶ್ಶಮಯತಾ ಕರ್ಣಾಟವಾಣ್ಯಾಽಧುನಾ
ವ್ಯಾಖ್ಯಾತಂ ಶತಕಂ ಚತುರ್ಥಮತುಲಂ ಗಾಥಾಸಹಸ್ರೇ ಮುನೇಃ॥

ಲಲಿತಸರಣಿನಾಮ್ನಾ ಕೋಮಲಾ ದಿವ್ಯಭಾವಾ
ಜಯತು ಜಗತಿ ಟೀಕಾ ಮೇಽತ್ರ ಕರ್ಣಾಟವಾಣ್ಯಾ।
ಶಠರಿಪುಮುನಿಗಾಥಾದಿವ್ಯಸಾಹಸ್ರಮಾಲಾ-
ವಿವೃತಿರಮೃತಪೂರ್ಣಾ ಲೋಕಸಂಜೀವಿನೀಯಮ್ ॥

---

ಸಹಸ್ರಗಾಥಾರತ್ನಾವಳ್ಯಾಖ್ಯಾ ವ್ಯಾಖ್ಯಾ ಮಯಾ ಕೃತಾ ।
ಗೈರ್ವಾಣೀ ! ಶತಕಂ ತತ್ರ ಚತುರ್ಥಂ ವಿವೃತಂ ಶುಭಮ್ ॥
ಮಮ ಶ್ರೀ ಕಲ್ಕಿಸಿಂಹಸ್ಯ ಭಕ್ತಾ ಭಗವತೋ ಹರೇಃ ।
ಶಠಾರಿವತ್ಸ್ವಯಂ ಭೋಗ್ಯಾಃ ಪರಮಾನನ್ದಮಾಪ್ನುಯುಃ ॥

---

ಇಂತು ಶ್ರೀ ಶಠಾರಿಮುನಿವರ್ಯ ವಿರಚಿತವಾದ
ತಿರುವಾಯ್ಮೊಳಿಯೆಂಬ

ಸುಪ್ರಸಿದ್ಧವಾದ ಸಹಸ್ರಗಾಥಾತ್ಮಕ—ದ್ರಾವಿಡ ದಿವ್ಯಪ್ರಬನ್ಧದ
ಲಲಿತಸರಣಿಯೆಂಬ ಕರ್ಣಾಟಭಾಷಾಟೀಕೆಯೊಳ್
ಚತುರ್ಥಶತಕದ ವ್ಯಾಖ್ಯಾನವು ಇಲ್ಲಿಗೆ
ಸಂಪೂರ್ಣವಾಗಿದೆ.

---

ಶ್ರೀಮತೇ ಶಠಕೋಪಾಯ ನಮಃ
ಶ್ರೀಮತೇ ಕಲ್ಕಿಸಿಂಹಾಯ ಭಗವತೇ ನಮಃ

ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು ಸಿಟಿ.